


# ಸಪ್ತಗಿರಿ

ಮಾರ್ಚ್, 1996

ಬೆಲೆ : ರೂ. 2/-

ತಿರುಮಲ ತಿರುಪತಿ ದೇವಸ್ಥಾನಗಳ ಸಚಿತ್ರ ಮಾಸಪತ್ರಿಕೆ



ಈಸಬೇಕು ಇದ್ದು ಜೈಸಬೇಕು || ಪ ||

ಹೇಸಿಗೆ ಸಂಸಾರದಲ್ಲಿ ಆಸೆ ಲೇಶವಿಡದಂತೆ || ಅ. ಪ. ||

ತಾಮರಸ ಜಲದಂತೆ ಪ್ರೇಮವಿಟ್ಟು ಭವದೊಳು
ಸ್ವಾಮಿರಾಮ ಎನುತ ಕಾಮಿತ ಕೈಗೊಂಬ ಜನರೆಲ್ಲ || ೧ ||

ಗೇರುಹಣ್ಣಿನಲ್ಲಿ ಬೀಜ ಸೇರಿದಂತೆ ಸಂಸಾರದಲ್ಲಿ
ಮೀರಿ ಆಸೆ ಮಾಡದಂತೆ ಧೀರ ಕೃಷ್ಣನ ಭಕುತರೆಲ್ಲ || ೨ ||

ಮಾಂಸದಾಸೆಗೆ ಮತ್ಸ್ಯ ಸಿಲುಕಿ ಹಿಂಸೆ ಪಟ್ಟ ಪರಿಯಂತೆ
ಮೋಸಹೋಗದ ಹಾಗೆ ಜಗದೀಶ ಪುರಂದರವಿಠಲನ ನೆನೆದು || ೩ ||

-ಶ್ರೀ ಪುರಂದರದಾಸರು

## ತಿರುಮಲ ತಿರುಪತಿ ದೇವಸ್ಥಾನಗಳು -- ತಿರುಪತಿ.



# ಶ್ರೀ ವೆಂಕಟೇಶ್ವರ ವನಾಭಿವೃದ್ಧಿ ಯೋಜನೆ



ತರುವೊಂದ ಬೆಳೆವವನು ದೇವರಾ ಸೇವಕನು
ಹರಿಪನವ ತಲೆಮಾರುಗಳಿಗೆಲ್ಲ ಕರುಣೆಯನು
ಹರಸುವರು ಅವನ, ಜನ, ಅವನೆಂದು ನೋಡದವರು



ತಿರುಮಲೆಯ ಕಾಡುಗಳು ಶ್ರೀ ವೆಂಕಟೇಶ್ವರಸ್ವಾಮಿ ತನ್ನ ಭಕ್ತರಿಗೆಂದೇ ನೀಡಿದ ಪ್ರಶಸ್ತ ವರವಾಗಿದೆ. ದೇವರು ಸ್ವಯಂವ್ಯಕ್ತನಾದ ತಿರುಮಲೆಯ ಪವಿತ್ರ ಪರ್ವತದ ಅಮೂಲ್ಯವಾದ ಕಾಡುಗಳನ್ನು ಪರಿರಕ್ಷಿಸಿಕೊಳ್ಳುವ ತೀವ್ರ ಆಕಾಂಕ್ಷೆಯಿಂದ ತಿರುಮಲೆ ತಿರುಪತಿ ದೇವಸ್ಥಾನಗಳು 1981 ರಲ್ಲಿ ಜೀವ ಸೌಂದರ್ಯಯೋಜನೆಯಡಿಯಲ್ಲಿ ತಿರುಪತಿ, ತಿರುಮಲೆಗಳಲ್ಲಿ 29 ಲಕ್ಷ ಗಿಡಗಳನ್ನು ಬೆಳೆಸುವ ಮಹತ್ವಾಕಾಂಕ್ಷೆಯ ಅರಣ್ಯಾಭಿವೃದ್ಧಿ ಕ್ರಮವನ್ನು ಕೈಗೊಂಡು ಕ್ರಿಯಾಶೀಲವಾಯಿತು. ಈ ಯೋಜನೆಯ ಮೂಲ ಉದ್ದೇಶ -- ತಿರುಪತಿಯ ತಪ್ಪಲು ಪ್ರದೇಶದಲ್ಲೂ, ತಿರುಮಲೆಯ ಪರ್ವತಾವಳಿಯಲ್ಲೂ ಜೈವಿಕ ವಾತಾವರಣವನ್ನು ಪರಿರಕ್ಷಿಸಿ ಸಂವರ್ಧಿಸುವುದು.

ಈ ಯೋಜನೆಯ ಸಾಫಲ್ಯದಿಂದ ಉತ್ತೇಜಿತರಾಗಿ ಉತ್ಸಾಹಿತರಾಗಿ ತಿರುಮಲೆ ತಿರುಪತಿ ದೇವಸ್ಥಾನಗಳು ಮತ್ತೂ ಹಲವಾರು ಕಾರ್ಯಕ್ರಮಗಳನ್ನು ಅದೇ ದಿಕ್ಕಿನಲ್ಲಿ ಹಮ್ಮಿಕೊಂಡಿದೆ. ಇದರ ಹೆಸರು--

## ಶ್ರೀ ವೆಂಕಟೇಶ್ವರ ವನಾಭಿವೃದ್ಧಿಯೋಜನೆ

ತಿ. ತಿ. ದೇ. ಗಳ ಅರಣ್ಯ ವಿಭಾಗ ಹಮ್ಮಿಕೊಂಡಿರುವ ಈ ಅರಣ್ಯಾಭಿವೃದ್ಧಿ ಯೋಜನೆಯಲ್ಲಿ ಸಾರ್ವಜನಿಕರೂ ಭಾಗವಹಿಸಬಹುದಾದ ವಿಶೇಷ ಅವಕಾಶವನ್ನು ಕಲ್ಪಿಸಲಾಗಿದೆ. ಈ ಯೋಜನೆಯ ಹಲವಾರು ಪ್ರಮುಖ ವಿವರಗಳನ್ನು ಪಟ್ಟಿ ಮಾಡಲಾಗಿದೆ.

**ವೃಕ್ಷಸಂವರ್ಧನ ಯೋಜನೆ :** ರೂ.೨೫೦೦೦ - ದಾನವನ್ನು ನೀಡುವವರ ಹೆಸರಿನಲ್ಲಿ ಅಥವಾ ಅವರು ಅಪೇಕ್ಷಿಸುವ ಹೆಸರಿನಲ್ಲಿ ೫೦೦ ಸಸಿಗಳನ್ನು ತಿರುಪತಿ ತಿರುಮಲೆ ಗಳಲ್ಲಿ ನೆಟ್ಟು ಐದು ವರ್ಷ ಅವುಗಳನ್ನು ನೋಡಿಕೊಳ್ಳಲಾಗುವುದು.

**ವೃಕ್ಷಪ್ರಸಾದ :** ರೂ.೧೫೦೦೦ - ದಾನವನ್ನು ನೀಡುವವರ ಪರವಾಗಿ ತಿರುಪತಿ, ತಿರುಮಲೆಯಲ್ಲಿ ಪ್ರತಿವರ್ಷ ೧೦೦ ಫಲ, ಪುಷ್ಪ ತರುಗಳನ್ನು ಬೆಳೆಸಲಾಗುವುದು. ಹತ್ತುವರ್ಷಗಳ ಕಾಲ ದಾನಿಗಳ ಅಥವಾ ಅವರು ಅಪೇಕ್ಷಿಸುವ ಹೆಸರಿನಲ್ಲಿ ಪ್ರತಿವರ್ಷ ೧೦೦ ಹೂ ಹಣ್ಣುಗಳ ಸಸಿಗಳನ್ನು ವಿತರಿಸಲಾಗುವುದು

**ಸ್ಮಾರಕ ವನಗಳು:** ರೂ ೫೦೦೦ ದಾನ ನೀಡುವವರ ಹೆಸರಿನಲ್ಲಿ ತಿರುಪತಿ ತಿರುಮಲೆಗಳಲ್ಲಿ ಹತ್ತುಮರಗಳನ್ನು ಒಂದೆಡೆ ನೆಟ್ಟು ಐದುವರ್ಷ ನೋಡಿಕೊಳ್ಳಲಾಗುವುದು.

**ವನ ಸಂರಕ್ಷಣ ಭಾಗಸ್ವಾಮ್ಯ:** ರೂ ೨೦೦೦ ದಾನದಿಂದ ದಾನಿಗಳ ಹೆಸರನ್ನು ಕಿರಿದಾಗಿ ಪ್ರಕಟಿಸುವ ಫಲಕದೊಡನೆ ತಿರುಮಲೆಯ ವನಾಚ್ಛಾದನೆಯನ್ನು ಸಂರಕ್ಷಿಸುವ ಯೋಜನೆಯಿದು.

**ಮುಖ್ಯ ಸೂಚನೆ:-** ೧. ಈ ಎಲ್ಲ ದಾನಗಳೂ, ೩೫ ಸಿ.ಸಿ.ಬಿ ಕಲಮಿನಂತೆ ನೂರು ಶತಾಂಶ ಆದಾಯಕರ ವಿಮುಕ್ತ ವಾಗಿರುತ್ತದೆ.

೨. ಈ ಪರಿಷ್ಕರಣಗಳು ೧-೨-೯೬ ರಿಂದ ಜಾರಿಗೆ ಬಂದಿವೆ. ಅದಕ್ಕೂ ಹಿಂದೆ ಶ್ರೀ ವೆಂಕಟೇಶ್ವರ ವನಾಭಿವೃದ್ಧಿ ಯೋಜನೆಯಲ್ಲಿ ಸೇರಿದವರಿಗೆ ಹಳೆಯ ಸೌಲಭ್ಯಗಳು ಮುಂದುವರೆಯುತ್ತವೆ.

ತಿರುಮಲೆಯ ಅರಣ್ಯನಮ್ಮ ಪರಂಪರೆಯ ಅವಿಭಾಜ್ಯ ಅಂಗ. ಅದನ್ನು ಸಂರಕ್ಷಿಸಿ ಸಂವರ್ಧನಗೊಳಿಸುವ.

ದಶಕೂಪ ಸಮೋವಾಪಿ ದಶ ವಾಪಿ ಸಮೋ ಹ್ರದ
ದಶಹ್ರದ ಸಮಃ ಪುತ್ರ ದಶ ಪುತ್ರ ಸಮೋ ದ್ರುಮ

ಹತ್ತು ಬಾವಿಗಳು ಒಂದು ಕೆರೆಗೂ, ಹತ್ತು ಕೆರೆಗಳು ಒಂದು ಸರೋವರಕ್ಕೂ ಹತ್ತು ಸರೋವರಗಳು ಒಬ್ಬ ಮಗನಿಗೂ, ಹತ್ತು ಮಕ್ಕಳು ಒಂದು ತರುವಿಗೂ ಸಮ.

ಈ ಉದಾತ್ತ ಯೋಜನೆಯಲ್ಲಿ ಪಾಲುಗೊಂಡು ಉದಾರವಾಗಿ ದಾನನೀಡಿ ತಿರುಮಲೆಯನ್ನು -- ಶ್ರೀ ವೆಂಕಟೇಶ್ವರಸ್ವಾಮಿ ನಿವಾಸವನ್ನು -- ವನಸಿರಿಯಿಂದಲೂ ಸೌಂದರ್ಯಸಿರಿಯಿಂದಲೂ ಕೂಡಿರುವಂತೆ ಮಾಡುವಲ್ಲಿ ಸಹಕರಿಸಬೇಕೆಂದು ಕೋರಲಾಗಿದೆ.



ದಾನಗಳ ಡಿ.ಡಿ. ಯನ್ನು ತಾವು ಕಳುಹಿಸ ಬೇಕಾದ ವಿಳಾಸ:

ಕಾರ್ಯನಿರ್ವಹಣಾಧಿಕಾರಿ, ತಿ.ತಿ.ದೇವಸ್ಥಾನಗಳು, ತಿರುಪತಿ.



ಕಾರ್ಯನಿರ್ವಹಣಾಧಿಕಾರಿ




ಗೌರವ ಸಂಪಾದಕರು :

ಎನ್. ರಮೇಶ್‌ಕುಮಾರ್ ಐ.ಎ.ಎಸ್.,

ಕಾರ್ಯನಿರ್ವಹಣಾಧಿಕಾರಿ,

ತಿ.ತಿ.ದೇ. ತಿರುಪತಿ.

ಸಂಪಾದಕ :

ಎನ್.ಎಸ್. ರಾಮಮೂರ್ತಿ, ಎಂ. ಎ.

ಉಪಸಂಪಾದಕ :

ಬಿ. ಎನ್. ಶ್ರೀನಿವಾಸನ್ ಎಂ. ಎ.,

ಮುದ್ರಣ :

ಪಿ. ಮೋಹನ್ ರಾವ್

ಲೇಖನ/ಜಾಹೀರಾತುಗಳಿಗೆ

ಮಿಕ್ಕವಿವರಗಳಿಗೆ

ಸಂಪಾದಕರು,

ತಿರುಮಲೆ ತಿರುಪತಿ ದೇವಸ್ಥಾನಗಳು,

ತಿರುಪತಿ.

ಸಪ್ತಗಿರಿಯ ಎಲ್ಲ ಭಾಷೆಯ ಪ್ರತಿಗಳೂ ಎಲ್ಲ ತಿ.ತಿ.ದೇ. ವಿಚಾರಣಾಕೇಂದ್ರಗಳಲ್ಲಿ ದೊರೆಯುವುವು.

**ಬಿಡಿ ಪ್ರತಿ ೨--೦೦**

**ವಾರ್ಷಿಕ ಚಂದಾ ೨೪--೦೦**


ಸಪ್ತಗಿರಿಯಲ್ಲಿ ಪ್ರಕಟವಾಗುವ ಲೇಖನಗಳಲ್ಲಿನ ಅಭಿಪ್ರಾಯಗಳು ಸಂಪಾದಕ ವರ್ಗದ, ಪತ್ರಿಕೆಯ, ಅಭಿಪ್ರಾಯಗಳೇ ಆಗಿರಬೇಕು ಎಂದಿಲ್ಲ. –ಸಂ|||


**ಸಂಪುಟ -- 26 ಮಾರ್ಚ್ 1996 ಸಂಚಿಕೆ --10**


# ವಿಷಯಸೂಚಿ



ಮುಖ ಚಿತ್ರ : ಉಗಾದಿ ಉತ್ಸವದಲ್ಲಿ ತಿರುಮಲೆಯ ಶ್ರೀ ಮಲೆಯಪ್ಪಸ್ವಾಮಿ.

ಹಿಂಬದಿಯಲ್ಲಿ : ಅಲಿಪಿರಿಯಲ್ಲಿ ಬೆಟ್ಟದ ಹಾದಿ.

ಒಳಗಡೆ : 1) ತಿರುಮಲೆಯಲ್ಲಿ ಪ್ಲವೋತ್ಸವ.

2) ತಿರುಪತಿಯಲ್ಲಿನ ಶ್ರೀ ಕೋದಂಡರಾಮಸ್ವಾಮಿ ಬ್ರಹ್ಮೋತ್ಸವ.






ಅಹಂ ಮಾನುಷಂ ಮನ್ಯೇ ದಶರಥಾತ್ಮಜಂ ಎಂದ ಶ್ರೀರಾಮಚಂದ್ರ. ಮರ್ಯಾದಾಪುರುಷೋತ್ತಮ ಅವನು ಎಂದು ಗುರುತಿಸಿದ್ದು ತುಲಸೀದಾಸ. ಅವನ ಹದಿನಾರು ಸದ್ಗುಣಗಳನ್ನು ಪಟ್ಟಿ ಮಾಡಿದ್ದು ನಾರದನಾದರೆ ಮೊದಲಿಗೆ ಅದನ್ನು ವಿವರಿಸಿದ್ದು ವಾಲ್ಮೀಕಿ. ಅಂದಿನಿಂದ ಇಂದಿನ ವರೆಗೆ ರಾಮಾಯಣ ಜನರ ಬಾಯಲ್ಲಿ ಜೀವನದಲ್ಲಿ ತುಂಬಿ ಹರಿದಿದೆ. ಕವಿ, ಗಾಯಕ, ನಟ, ನರ್ತಕ, ಲಲಿತ ಕಲಾಕೋವಿದರ ಸ್ಫೂರ್ತಿಯ ಚಿಲುಮೆಯಾಗಿ ಹರಿದಿದೆ. ಪರ್ವತ ನದಿಗಳಿರುವವರೆಗೆ ಸೂರ್ಯಚಂದ್ರರಿರುವರೆಗೆ ರಾಮಾಯಣ ನಿಲ್ಲುವುದೆಂಬ ಪ್ರಶಸ್ತಿಯೊಡನೆ.

ಹಾಗೆಯೇ ಅದನ್ನು ವಿವರಿಸುವ ವಿವರಣೆಕಾರರಿಗೂ ವಿಶ್ಲೇಷಿಸುವ ವಿದ್ವಜ್ಜನರಿಗೂ ವಸ್ತುವಾಗಿದೆ. ಟೀಕಾ ತಾತ್ಪರ್ಯ ಭಾಷ್ಯಗಳನ್ನು ಬರೆದವರು ಬಹುಮಂದಿ ಯಾದರೆ ಟೀಕೆ ವಿಮರ್ಶೆ ಮಾಡಿದವರೂ ಬಹುಮಂದಿಯೇ. ಇಷ್ಟು ಶತಮಾನಗಳ ದ ಜನಕ್ಕೆ ಪರವಿರುದ್ಧ ವಾದ ಗ್ರಾಸವಾದದ್ದೇ ಅದರ ಜೀವಂತಿಕೆಗೆ ಸಾಕ್ಷಿಯೆನ್ನಲಿಕ್ಕೂ ಬರುತ್ತದೆ. ಎಲ್ಲರೂ ಅಂದಂದಿನ ಸಮಾಜದ, ಆರ್ಥಿಕತೆಯ, ಆಧ್ಯಾತ್ಮಿಕ, ಅವರವರ ಆಂತರಿಕ ಅಗತ್ಯಗಳಿಗೆ ತಕ್ಕಂತೆ ಅದನ್ನು ಕಂಡವರೇ ಆದರೂ, ರಾಮಾಯಣ ಕಾಲದಲ್ಲೂ ಅದರದೇ ಆದ ಅಳತೆಗೋಲುಗಳು, ಸ್ವಭಾವಗಳು, ಇದ್ದವು ಎಂಬುದನ್ನೂ ಮರೆಯುವಂತಿಲ್ಲ. ತನ್ನ ಸಮಾಜದ ಸಮಕಾಲೀನ ಪರಿಸ್ಥಿತಿಗಳಿಂದ ಪ್ರಭಾವಿತವಾದ ಪಂಡಿತ ವಿಮರ್ಶಕ ವಿವರಣೆಗಳಲ್ಲಿ ಅವರವರ ಪಾಂಡಿತ್ಯ, ಪ್ರೌಢಿಮೆ, ಪ್ರತಿಭೆಗಳು ಪ್ರಕಟವಾಗಿವೆಯಾದರೂ, ರಾಮಾಯಣದಂತೆಯೇ ಚಿರಕಾಲ ಉಳಿಯುವ ವ್ಯಾಖ್ಯಾನ ವಿಮರ್ಶೆಗಳೂ ಹಲವಾರುಂಟು - ಅವುಗಳಿಂದಾಗಿ ಮೂಲಾಕಾವ್ಯವನ್ನು, ಅಲ್ಲಿನ ವ್ಯಕ್ತಿ ಸ್ವಭಾವವನ್ನು ಅರಿಯುವಲ್ಲಿ ಹಲವು ರೀತಿಯ ನೆರವು, ಹೊಳಹು, ಬೆಳಕುಗಳು ದೊರೆಯುತ್ತವೆ ಎಂಬುದೂ ಸತ್ಯ.

ದೇವರು ಎಂದು ನಾವು ಗುರುತಿಸಿದರೂ ತಾನು ಮನುಷ್ಯಮಾತ್ರನಾದವನು ಎಂದು ಹೇಳಿಕೊಂಡ ರಾಮಚಂದ್ರನ ಜೀವನದಲ್ಲಿಯೂ ಅವನದೇ ಆದ ಅಳತೆಗೋಲುಗಳು ಇರುವುದು ಸಾಧ್ಯ. ಅಂದ ಮೇಲೆ ಅವನ ತುಡಿತಗಳಲ್ಲಿ, ಕಾಳಜಿಗಳಲ್ಲಿ, ಕಾರ್ಯ ಚಟುವಟಿಕೆಯಲ್ಲಿ ನಾವು ಅಂದುಕೊಂಡ ದೇವರ ಗುಣವಿಲ್ಲವೆಂದು ನಂತರ ಹಳಿಯುವುದರಲ್ಲಿ ಅರ್ಥವಿಲ್ಲ. ಏನಿದ್ದರೂ ಕಾವ್ಯವೇ ಸಾಕ್ಷ್ಯವನ್ನು ಒದಗಿಸಬೇಕು ಎಂದು ಆಡುವಾಗ ಕಾವ್ಯದಲ್ಲಿಯೇ ಕಂಡುಬರುವ ಸಾಕ್ಷ್ಯಗಳನ್ನು ಸೂಕ್ಷ್ಮಗಳನ್ನು ಗಮನಿಸಲೇಬೇಕಾದ ಅಗತ್ಯ ಉಂಟಾಗುವುದು.

ರಾಮಾಯಣ ಭಾರತಗಳಂತಹ ಪ್ರಾಚೀನ ಕಾವ್ಯಗಳನ್ನು ಕೈಗೆತ್ತಿಕೊಂಡಾಗ ಅಲ್ಲಿ ಕವಿಯದೆಷ್ಟು ನಂತರದವರದೆಷ್ಟು, ಪ್ರಕ್ಷಿಪ್ತವೆಷ್ಟು, ತ್ರುಟಿತವೆಷ್ಟು ಎಂಬ ಪ್ರಶ್ನೆಯೂ ಉಂಟಾಗುತ್ತದೆ. ಇದನ್ನು ಬಗೆಹರಿಸುವುದು ಗ್ರಂಥ ಸಂಪಾದನೆಯ ಎತ್ತರದ ಸ್ತರದ ಕೆಲಸ. ವಾದ ವಿವಾದಗಳ ತಳವರಿಯದ ಧುಮುಕು, ಬಗೆಹರಿಯದ ಜಂಜಡವಾಗಿ ಶ್ರೀಸಾಮಾನ್ಯರಿಗೆ ಎಟುಕದ ನಿಲುವು. ವಾಲ್ಮೀಕಿ ವ್ಯಾಸರ ಬಗ್ಗೆ, ಅವರ ಕಾವ್ಯ ನಿರ್ಮಾಣದ ತರದೇತಿ, ಮಜಲು, ಗಮನಗಳ ಬಗ್ಗೆ ಅಷ್ಟೊಂದು ಹೆಚ್ಚು ತಿಳಿಯದ ಹೊತ್ತಿನಲ್ಲಿ ಅವರು ಬರೆದದ್ದು ಇಷ್ಟೇ ಎಂದು ನಿರ್ಧರಿಸುವುದೂ ಅಂತಹದೇ ಆದ ಇನ್ನೊಂದು ಫಲ ಕಾಣದ ಪ್ರಯತ್ನ. ಒಂದು ಪರಂಪರೆ - ಅದರಲ್ಲಿ ಬಂದದ್ದು ಇಷ್ಟು - ಆದ್ದರಿಂದ ಇಷ್ಟೂ ವಾಲ್ಮೀಕಿ ಪರಂಪರೆ ಇಷ್ಟು ವ್ಯಾಸ ಪರಂಪರೆ ಎಂದು ಮನ್ನಿಸುವುದೇ ಸೂಕ್ತವೆನ್ನಿಸುತ್ತದೆ. ಹಾಗಾಗಿ ಬಾಲಕಾಂಡದ ಒಂದು ಭಾಗ, ಉತ್ತರಕಾಂಡ ಎಲ್ಲವೂ ಸೇರಿದ್ದು ರಾಮಾಯಣ ಎನ್ನಲು ಅಡ್ಡಿಯಿಲ್ಲ.

'ಅಭಯಂ ಸರ್ವಭೂತೇಭ್ಯೋ ದದಾಮ್ಯೇ ತದ್ವ್ರತಂ ಮಮ' ಎನ್ನುವವ (ಮನುಷ್ಯ), (ದೇವರು) ಯಾರನ್ನಾದರೂ ನೋಯಿಸುವುದು ಸಾಧ್ಯವೇ ? ಶರಣು ಬಂದರೆ ರಾವಣನಿಗೇ ಅಭಯ ನೀಡುತ್ತೇನೆ ಎಂದ ಮಹಾಪುರುಷ ಆತ. ಆತ ಏಕ ಬಾಣ, ಏಕ ಪತ್ನೀವ್ರತನಾದಂತೆಯೇ ಏಕ ವಾಕ್ಯನೂ ಹೌದು. ಎಂಬುದು ಅಲ್ಲಿಯೇ ಕಂಡುಬರುವ ಸತ್ಯ. ವಿಭೀಷಣನನ್ನು ಆದರಿಸುವ ಮೊದಲೇ ಆತ ಶಬರಿಯನ್ನು ಸತ್ಕರಿಸುವ ಸಂದರ್ಭವನ್ನು ಗಮನಿಸಿದರೆ ಅವನ ಹೃದಯದ ವೈಶಾಲ್ಯ ಆರ್ದ್ರತೆಯ ಅರಿವಾಗುತ್ತದೆ.

ಇಂತಹ ಪುರುಷ ಶ್ರೇಷ್ಠನನ್ನು ತುಲಸೀದಾಸ ಮರ್ಯಾದಾ ಪುರುಷೋತ್ತಮ ಎಂದದ್ದರಲ್ಲಿ ಔಚಿತ್ಯವಿದೆ. ಪುರುಷಧರ್ಮ - ಇಲ್ಲಿ ಮಾನವಧರ್ಮ ಎಂಬರ್ಥದಲ್ಲಿ - ಒಂದು ಮರ್ಯಾದೆಯ ಒಳಗೇ ಕೆಲಸಮಾಡಬೇಕು. ಅದನ್ನು ಮೀರಿ ಹೋಗದ - ಪುರುಷೋತ್ತಮ ಆತ ಅಥವಾ ಪುರುಷೋತ್ತಮತೆಯ ಸೀಮೆ ಆತ. ಹೇಗೆ ತೆಗೆದುಕೊಂಡರೂ ಅದು ಆದರ್ಶವೇ ಆಗಿ, ಆತ ದೈವ ಎನ್ನುವುದರಲ್ಲಿ ಅತಿಶಯೋಕ್ತಿಯಾಗದು.

ರಾಮನವಮಿಯ ಸಂದರ್ಭದಲ್ಲಿ ಅವನನ್ನು ನೆನೆದು ನಮಿಸುವ.

|| ಶ್ರೀರಾಮಂ ನಮಾಮಿ ||

# ಯುಗಾದಿ ಮರಳಿ ಬರುತಿದೆ

ಸಾಲೀಮಠ ದೊಡ್ಡಯ್ಯಶಾಸ್ತ್ರಿ.

ಯುಗಯುಗಾದಿ ಕಳೆದರೂ ಯುಗಾದಿ ಮರಳಿ ಬರುತಿದೆ, ಎಂಬ ಬೇಂದ್ರೆಯವರ ಕವನವಿದೆ. ಎಷ್ಟೋ ಯುಗಾದಿ ಕಳೆದಿದ್ದರೂ ಪ್ರತಿ ಯುಗಾದಿ ಬಂದಾಗಲೂ ಅದು ನೂತನತ್ವವನ್ನು ಪಡೆಯುತ್ತದೆ.

ಯುಗಾದಿ ಎಂದರೆ ಯುಗದ ಆದಿ ಎಂದರ್ಥ. ಮೊದಲು ಯುಗವು ಪ್ರಾರಂಭವಾಗಿದ್ದು ಅಂದರೆ ಈ ಮಹತ್ವಪೂರ್ಣ ಪ್ರಪಂಚವನ್ನು ಬ್ರಹ್ಮನು ಸೃಷ್ಟಿಸಿದ್ದು, ಚೈತ್ರಮಾಸದ ಮೊದಲದಿನದಲ್ಲಿ. ಆ ದಿನವನ್ನು ಯುಗಾದಿ ಎಂದು ಕರೆಯಲಾಯಿತು. ಹಿಂದುಗಳ ಪಾಲಿಗೆ ಧಾರ್ಮಿಕ ಹಬ್ಬವಾಗಿ ಪ್ರಚಾರಪಟ್ಟು ಸರ್ವರೂ ಸಂತಸದಿಂದ ಕಳೆಯುವ ದಿನವಾಯಿತು.

ಯುಗಾದಿ ದಿನದಂದು ಸ್ನಾನ, ಪೂಜಾವಿಧಿಗಳನ್ನು ಮುಗಿಸಿ ಹೊಸಬಟ್ಟೆಯನ್ನುಟ್ಟು ಹಿರಿಯರಿಗೆ ನಮಸ್ಕರಿಸಿ ಬೇವು ಬೆಲ್ಲವನ್ನು ತಿನ್ನುವ ಪದ್ಧತಿ ಇದೆ. ಅದಕ್ಕೂ ಸಹ ಅದ್ಭುತವಾದ ಸತ್ವವನ್ನು ಅದರ ಹಿಂದೆ ಇಟ್ಟಿದ್ದಾರೆ ನಮ್ಮ ಹಿರಿಯರು. ಬೇವು ಬೆಲ್ಲವನ್ನು ಸೇವಿಸುವುದರಿಂದ ಜೀವನದಲ್ಲಿ ಬರುವ ಕಷ್ಟ ಸುಖಗಳನ್ನು ಸಮಾನವಾಗಿ ಕಾಣುವ ಮನೋಸ್ಥೈರ್ಯವನ್ನು ದೇವರು ದಯಪಾಲಿಸಲಿ ಎಂದು ಹಾಗೂ ವೈಜ್ಞಾನಿಕವಾಗಿ ಸಹ ಬಹಳಷ್ಟು ಉಪಯೋಗ ಕೂಡ, ಬೆಲ್ಲ ಆಯಾಸ ಪರಿಹಾರಕ ಕ್ರಿಮಿನಾಶಕ ಕೂಡ. ಬೇವು ಕಹಿಯಾದರೂ ದೇಹಕ್ಕೆ ಅವಶ್ಯಕ ಹಾಗೂ ಹಲವು ರೋಗಗಳನ್ನು ನಿವಾರಿಸುವ ಶಕ್ತಿ ಕಾರಕ - ಇದರಿಂದ ವ್ಯಕ್ತವಾಗುವುದೇನೆಂದರೆ ನಮ್ಮ ಪೂರ್ವಿಕರು ಒಂದು ಸಂಪ್ರದಾಯವನ್ನು ರೂಢಿಯಲ್ಲಿ ತರಬೇಕಾದರೆ ಆದಮ್ಯ ಜಾಣ್ಮೆಯನ್ನು ತೋರುತ್ತಿದ್ದರು ಎಂಬುದು.

ಬೇವು ಬೆಲ್ಲವನ್ನು ಸೇವಿಸುವಾಗ ಈ ಕೆಳಗಿನ ಮಂತ್ರವನ್ನು ಉದ್ಧಾರಮಾಡುತ್ತಾ ಸೇವಿಸಬೇಕು ಎಂದಿದೆ.

ಶತಾಯುರ್ವಜ್ರದೇಹಾಯ
ಸರ್ವ ಸಂಪತ್ಕರಾಯ ಚ
ಸರ್ವಾರಿಷ್ಟ ವಿನಾಶಾಯ
ನಿಂಭಕದಳ ಭಕ್ಷಣಂ

ನಿಂಭಕದಳ ಸೇವಿಸುವುದರಿಂದ (ಬೇವು) ದೀರ್ಘಾಯುಷ್ಯ, ವಜ್ರದೇಹ ಹಾಗೂ ಸಕಲ ಸಂಪತ್ತು ಲಭಿಸುವುದಲ್ಲದೆ ಸರ್ವ ಅನಿಷ್ಟಗಳು ಪರಿಹಾರವಾಗುವುದೆಂದರ್ಥ.

ಯುಗಾದಿಯನ್ನು ಚಾಂದ್ರಮಾನಯುಗಾದಿಯೆಂತಲೂ ಹಾಗೂ ಸೌರಮಾನಯುಗಾದಿಯೆಂತಲೂ ಕರೆಯುತ್ತಾರೆ. ದಕ್ಷಿಣ ಕನ್ನಡದವರು ಸೌರಮಾನ ಯುಗಾದಿಯನ್ನು ಆಚರಿಸಿದರೆ ಈ ಕಡೆ ಚಾಂದ್ರಮಾನ ಯುಗಾದಿಯನ್ನು ಆಚರಿಸುತ್ತಾರೆ. ಕಾರಣ ವಿಷ್ಟೆ, ದಕ್ಷಿಣ ಕನ್ನಡ ಕ್ಷೇತ್ರ ಪರಶುರಾಮರು ಸೃಷ್ಟಿಯಾಗಿದ್ದು, ಅಲ್ಲಿನವರು ಸೂರ್ಯನ ಚಲನೆಯನ್ನು ಆಧರಿಸಿ ಲೆಕ್ಕಾಚಾರ, ಹಾಗೆ ಕಾಲಗತಿ ಹಿಡಿದು ಯುಗಾದಿ ಆಚರಿಸುವುದಕ್ಕೆ ಸೌರಮಾನವೆಂದು ಕರೆಯುತ್ತಾರೆ.

ಆದರೆ ಈ ಕಡೆ ಚಂದ್ರನಗತಿಯನ್ನು ಅನುಸರಿಸಿ ಲೆಕ್ಕಾಚಾರ ಹಾಕಿ ಕಾಲಮಾನವನ್ನು ನಿರ್ಧರಿಸುವುದರಿಂದ ಚಂದ್ರಮಾನವೆಂತಲೂ ಕರೆಯುತ್ತಾರೆ. ಇದರಿಂದ ಇಲ್ಲಿ ಎರಡು ಯುಗಾದಿಗಳು ಉದ್ಭವವಾಗುತ್ತವೆ. ಆದರೆ ಇಲ್ಲಿ ಗಮನಿಸಬೇಕಾದ ಅಂಶವೆಂದರೆ ಬ್ರಹ್ಮನು ಈ ಪ್ರಪಂಚವನ್ನು ಚೈತ್ರಮಾಸದ ಪಾಡ್ಯದಂದು ರವಿಯುದಯದ ಕಾಲದಲ್ಲಿ ಸೃಷ್ಟಿಸಿದ ಎಂದಿದೆ, ಅಂದಿನಿಂದ ಯುಗ ಪ್ರಾರಂಭವಾಗಿ ಯುಗಾದಿ ಎಂದು ಆಚರಣೆಗೆ ಎಂದಿದೆ. ಆದ್ದರಿಂದ ರವಿಯ ಗತಿಯನ್ನು ಹಿಡಿದು ಆಚರಿಸುವುದು ಸರಿ ಎಂದೆನಿಸುತ್ತದೆ.

ಆದ್ದರಿಂದ ಯುಗಾದಿಯಿಂದ ಮೊದಲುಗೊಂಡು, ಸಂಕ್ರಾಂತಿಯವರೆಗೆ ಹಲವು ಹಬ್ಬಗಳು ದಕ್ಷಿಣ ಕನ್ನಡದವರಿಗೂ ಈ ಕಡೆಯವರಿಗೂ ಕೆಲವು ದಿನಗಳ ವ್ಯತ್ಯಾಸದಲ್ಲೆ ಬರುತ್ತದೆ.

ಈ ಯುಗಾದಿ ದಿನದಂದು ಯುಗಾದಿ ಫಲ ಓದುವರೂಢಿ ಉಂಟು. ಬಹಳಷ್ಟು ಜನ ಇದನ್ನು ಆಲಿಸಲು ಹೋಗುವುದುಂಟು. ಈ ದಿನ ನವಗ್ರಹ ಪೂಜೆ, ಪಂಚಾಂಗಪೂಜೆ . ಇಷ್ಟದೇವರ ಪೂಜೆ, ನಂತರ ಬಂಧು ಮಿತ್ರರೊಡಗೂಡಿ ಸಿಹಿ ಭೋಜನವನ್ನು ಮಾಡುತ್ತಾರೆ.

ಧಾತೃನಾಮ ಸಂವತ್ಸರ ಆರಂಭ ಮುಂದೆ ಯುಗಾದಿ ಮರಳಿ ಬರುತ್ತದೆ, ಪುನಃ ಇದೆ ಪುನರಾವರ್ತನೆಗೊಳ್ಳುತ್ತದೆ. ಈ ಯುಗಾದಿ ಸರ್ವರಿಗೂ ಶುಭವನ್ನು ತರಲಿ ಎಂದು ಹಾರೈಸುತ್ತೇವೆ.

## ಸಪ್ತಗಿರಿ

**ಆದರಣೀಯ ವಾಚಕರಿಗೆ ಏಜಂಟರಿಗೆ**
**ಧಾತೃನಾಮ ಸಂವತ್ಸರದಲ್ಲಿ**

ಶ್ರೀ ವೇಂಕಟೇಶ್ವರಸ್ವಾಮಿಯ ಅನುಗ್ರಹ ಲಭಿಸಲಿ
ಎಂದು ಹಾರೈಸುತ್ತ ಹಾರ್ದಿಕ ಶುಭಾಶಯಗಳನ್ನು ಕೋರುತ್ತೇವೆ.

ಸಂಪಾದಕ
**ಸಪ್ತಗಿರಿ**

# ಕರುಣಾಮಯಿ ಶ್ರೀರಾಮ

---ಸಂತಹರಿಹರಾನಂದಸರಸ್ವತೀ.

ಲಂಕೆಯಲ್ಲಿ ಆಂಜನೇಯ ಮತ್ತು ವಿಭೀಷಣನ ಪರಸ್ಪರ (ಸಂಪರ್ಕ) ಭೇಟಿಯಾದಾಗಿನ ಸಂದರ್ಭವನ್ನು ತುಳಸೀದಾಸರು ತಮ್ಮ "ರಾಮಚರಿತ" ಮಾನಸದಲ್ಲಿ ಬಹು ಸುಂದರವಾಗಿ ವರ್ಣಿಸಿದ್ದಾರೆ.

ಹನುಮ ತನ್ನ ವೈಯಕ್ತಿಕ ಪರಿಚಯವನ್ನು ಭಾಗವತ್ತೋತ್ತಮನಾದ ವಿಭೀಷಣನಿಗೆ ಸಂಕ್ಷಿಪ್ತವಾಗಿ ಮಾಡಿಕೊಡುತ್ತಾ ತಾನು ಕೋಸಲೇಂದ್ರನಾದ ಶ್ರೀರಾಮನ ದೂತನೆಂದೂ ಆತನ, ಆ ಪುಣ್ಯಪುರುಷನ ಅಪಹೃತಳಾದ ಸೀತೆಯನ್ನು ಹುಡುಕುತ್ತಾ ಸಮುದ್ರವನ್ನು ದಾಟಿ ಲಂಕೆಗೆ ಬಂದುದಾಗಿಯೂ ತಿಳಿಸಿದಾಗ - ವಿಭೀಷಣನಿಗೆ ಆದ ಸಂತೋಷಕ್ಕೆ ಪಾರವೇ ಇಲ್ಲವಾಯಿತು.

ತರುವಾಯ ವಿಭೀಷಣನು ತನಗಾದ ಸಂತಸ ಸಂಭ್ರಮಗಳನ್ನು ಹನುಮಂತನಲ್ಲಿ ತೋಡಿಕೊಳ್ಳುತ್ತಾನೆ. ಮಿತ್ರ - ನಿನ್ನ ಪ್ರಭುವಾದ ಆ ಶ್ರೀರಾಮಚಂದ್ರನು ಅದೆಷ್ಟು ಕರುಣಾಮಯಿ. ವರ್ಣಿಸಲೇ ಬಾಯಿ ಇಲ್ಲವಾಗಿದೆ. ಎಂದರೆ ಶಬ್ದಗಳೇ ದೊರೆಯದಾಗಿದೆ.

ಓರ್ವ ಸಾಮಾನ್ಯನ ಮೇಲೆ ಎಷ್ಟೊಂದು ಕೃಪೆಮಾಡಿದ್ದಾನೆ. ಹೇಳುವೆ ಕೇಳು ಹನುಮಾ

ತಾಮಸ ತನುಖಟು ಸಾಧನ ನಾಹಿ
ಪ್ರೀತಿನ ಪದ ಸರೋಜಮನ ಮಾಹಿ
ಅಭ ಮೋಹಿ ಬಾ ಭರೋಸಾ ಹನುಮಂತ
ಬಿನು ಹರಿ ಕೃಪಾ ಮಿಲಹಿ ನಹಿ ಸಂತ

ಮಿತ್ರ, ನನ್ನದು ತಾಮಸದೇಹ. ಹೇಳಿಕೊಳ್ಳುವಂತಹ ಸಾಧನೆಯನ್ನೇನೂ ನಾನು ಮಾಡಿಲ್ಲ. ಆ ದಯಾಮಯಿ ಶ್ರೀರಾಮನ ಪಾದ ಕಮಲಗಳಲ್ಲಿ ಪ್ರೀತಿ ಎನ್ನುವುದು ಎಳ್ಳಿನಷ್ಟೂ ಇಲ್ಲ. ಇಂತಹುದರಲ್ಲಿ ನಿನ್ನಂತಹ ಸಂತಶ್ರೇಷ್ಠನ ದರ್ಶನವಾಗಬೇಕಾದರೆ ಆ ಪುರಾಣಪುರುಷನೂ, ಪುಣ್ಯಶ್ಲೋಕನೂ ಆದ ಸೀತಾಪತಿಯ ಕೃಪೆಯಿಂದಲೇ ಸಾಧ್ಯವಾಗಿದೆ ಎಂದು ನನ್ನ ಅನಿಸಿಕೆಯಾಗಿದೆ. ಅವನ ಕೃಪೆ ಇಲ್ಲದಿರೆ ಇದು ಸಾಧ್ಯವಾಗುವುದಿಲ್ಲ ಎನ್ನುತ್ತಾನೆ.

ಅವನ ಮಾತುಗಳನ್ನು ಕೇಳಿದ ಹನುಮನು, ಪ್ರಿಯಮಿತ್ರ ವಿಭೀಷಣ ನನ್ನ ಸ್ವಾಮಿ ಶ್ರೀರಾಮಚಂದ್ರನ ಸ್ವಭಾವವೇ ಅಂತಹುದು. ಅವನು ಯಾರಮೇಲೆ ಯಾವಾಗ ತನ್ನ ಅನಂತ ಕರುಣೆಯ ಮಹಾಪೂರವನ್ನು ಹರಿಸುತ್ತಾನೆ ಎಂದು ಹೇಳಲು ಸಾಧ್ಯವಿಲ್ಲವೆಂದು ಹೇಳಿ - ವಿಭೀಷಣನನ್ನು ಅಪ್ಪಿಕೊಳ್ಳುತ್ತಾನೆ.



# ರಾಮನ ಗುಣ ವರ್ಣನೆ

---ಗುರುನಾಥ ಇನಾಮದಾರ.

ರಾಮಾಯಣದ ಬಾಲಕಾಂಡದ ಒಂದನೇ ಸರ್ಗದಲ್ಲಿ ದೇವರ್ಷಿ ನಾರದರು ರಾಮಾಯಣ ವನ್ನು ರಚಿಸಿದ ವಾಲ್ಮೀಕಿ ಮಹರ್ಷಿಗಳಿಗೆ ಶ್ರೀರಾಮನ ಗುಣಗಳನ್ನು ಬಣ್ಣಿಸಿ ತುಂಬ ಸೊಗಸಾಗಿ ಹೇಳಿದ್ದಾರೆ. ನಾರದರಿಂದ ತನ್ನ ಆರಾಧ್ಯದೈವನಾದ ಶ್ರೀರಾಮನ ಗುಣವರ್ಣನೆ ಕೇಳಿದ ಮಹರ್ಷಿಗಳು ಅದರಿಂದ ಪ್ರೇರಿತರಾಗಿ ಮುಂದೆ ಶ್ರೀರಾಮನ ಕಥೆಯನ್ನೇ 'ರಾಮಾಯಣ' ರೂಪದಲ್ಲಿ ಬರೆದರೆಂದು ಪ್ರತೀತಿ. ನಾರದರು ವಾಲ್ಮೀಕಿ ಮಹರ್ಷಿಗಳೆದುರಿಗೆ ಮಾಡಿದ ಶ್ರೀರಾಮನ ಗುಣವರ್ಣನೆಯ ಪ್ರಸಂಗ ಹೀಗಿದೆ.

ತಪಃ ಸ್ವಾಧ್ಯಾಯ ನಿರತಂ
ತಪಸ್ವಿ ವಾಗ್ವಿದಾಂ ವರಮ್
ನಾರದಂ ಪರಿಪಪ್ರಚ್ಛ
ವಾಲ್ಮೀಕಿ ಮುನಿಪುಂಗವಮ್
ಕೋ ತ್ವಸ್ಮಿನ್ ಸಾಂಪ್ರತಂ ಲೋಕೆ
ಗುಣವಾನ್ ಕಶ್ಚ ವೀರ್ಯವಾನ್
ಧರ್ಮಜ್ಞಶ್ಚ ಕೃತಜ್ಞಶ್ಚ
ಸತ್ಯವಾಕ್ಯೋ ದೃಢವ್ರತಃ

ಒಮ್ಮೆ ಮಹರ್ಷಿ ವಾಲ್ಮೀಕಿಯವರು ದೇವರ್ಷಿ, ತಪಸ್ವಿ ಹಾಗೂ ವಿದ್ವಾಂಸ ನಾರದರನ್ನು ಕುರಿತು "ಗುಣವಂತನೂ, ವೀರ್ಯವಂತನೂ, ಧರ್ಮಜ್ಞನೂ ಹಾಗೂ ಕೃತಜ್ಞನನೂ ಆದ ನಿಶ್ಚಯಬುದ್ಧಿಯವರು ಯಾರಾದರೂ ಇಂದಿನ ಕಾಲದಲ್ಲಿ ಇರುವರೇ" ಎಂದು ಕೇಳಿದರು. ಅಲ್ಲದೆ-

ಚರಿತ್ರೇಣ ಚ ಕೋ ಯುಕ್ತಃ
ಸರ್ವಭೂತೇಷು ಕೋ ಹಿತಃ
ವಿದ್ವಾನ್ ಕಃ ಕಃ ಸಮರ್ಥಶ್ಚ
ಕಶ್ಚೈಕ ಪ್ರಿಯದರ್ಶನಃ
ಆತ್ಮವಾನ್ ಕೋ ಜಿತ ಕ್ರೋಧೋ
ದ್ಯುತಿಮಾನ್ ಕೋಽನಸೂಯತಃ
ಕಸ್ಯ ಬಿಭ್ಯತಿ ದೇವಾಶ್ಚ
ಜಾತರೋಷಸ್ಯ ಸಂಯುಗೆ

"ಯಾರ ಚಾರಿತ್ರವು ಶ್ರೇಷ್ಠವಾಗಿದೆ? ಯಾರು ಎಲ್ಲ ಜೀವಿಗಳಿಗೂ ಹಿತಬಯಸುವವನು ? ಜ್ಞಾನಿಯೂ, ಸಾಮರ್ಥ್ಯಶಾಲಿಯೂ ಹಾಗೂ ಎಲ್ಲರಿಗೂ ಬೇಕಾದ ಏಕೈಕ ವ್ಯಕ್ತಿಯು ಯಾರು? ಸ್ವಾರ್ಥರಹಿತನೂ, ಕೋಪ ಗೆದ್ದವನೂ, ದಿವ್ಯನೂ, ಅಸೂಯಾ ರಹಿತನಾದವನು ಯಾರು? ಯುದ್ಧದಲ್ಲಿ ತನ್ನ ಶಕ್ತಿಯಿಂದ ದೇವತೆಗಳನ್ನು ದಿಗ್ಭ್ರಮೆಗೊಳಿಸಿದವನು ಯಾರು ?

ಏತದಿಚ್ಛಾಮ್ಯಹಂ ಶ್ರೋತಂ
ಪರಂ ಕೌತುಹಲಂ ಹಿ ಮೇ
ಮಹರ್ಷೇ ತ್ವಂ ಸಮರ್ಥೋಽಸಿ
ಜ್ಞಾತುಮೇವಂ ವಿಧಂ ನರಮ್

ಇಂಥ ವ್ಯಕ್ತಿಯ ಬಗ್ಗೆ ತಿಳಿದುಕೊಳ್ಳಬೇಕೆಂಬ ಕುತೂಹಲ ನನಗಿದೆ. ತಾವು ಮಾತ್ರ ಈ ಬಗ್ಗೆ ಹೇಳಲು ಸಮರ್ಥರಾಗಿರುವುದರಿಂದ ದಯವಿಟ್ಟು ಹೇಳಬೇಕು ಎಂದು ವಾಲ್ಮೀಕಿ ಕೇಳಲು--

ಶ್ರುತ್ವಾ ಚೈತ ತ್ರಿಲೋಕಜ್ಞೋ
ವಾಲ್ಮೀಕಿ ರ್ನಾರದೋ ವಚಃ
ಶ್ರುಯತಾಮಿತಿ ಚಾಮಂತ್ರಯ
ಪ್ರಹೃಷ್ಟೋ ವಾಕ್ಯಮಬ್ರವೀತ್
ಬಹವೋ ದುರ್ಲಭಾಶ್ಚೈವ
ಯೇತ್ವಯಾ ಕೀರ್ತಿತಾ ಗುಣಾಃ
ಮುನೇ ವಕ್ಷ್ಯಾಮ್ಯಹಂ ಬುದ್ಧ್ವಾ
ತೈರ್ಯುಕ್ತಃ ಶ್ರೂಯತಾಂ ನರಃ

ವಾಲ್ಮೀಕಿ ಮಹರ್ಷಿಯ ಈ ಮಾತುಗಳನ್ನು ಕೇಳಿ ಸಂತಸಗೊಂಡ ತ್ರಿಲೋಕ ಜ್ಞಾನಿಗಳಾದ ದೇವರ್ಷಿ ನಾರದರು "ನೀವು ಹೇಳಿದ ಗುಣಗಳೆಲ್ಲವುಗಳನ್ನು ಹೊಂದಿರುವವರು ಅತ್ಯಂತ ವಿರಳ. ಆದರೂ ಈ ಎಲ್ಲ ಗುಣಗಳಿಂದೊಡಗೂಡಿದ ವ್ಯಕ್ತಿಯನ್ನು ಕುರಿತು ಹೇಳುತ್ತೇನೆ, ಕೇಳಿ" ಎಂದರು.

ಇಕ್ಷ್ವಾಕು ವಂಶ ಪ್ರಭವೋ
ರಾಮೋ ನಾಮ ಜನೈಃ ಶ್ರುತಃ
ನಿಯತಾತ್ಮಾ ಮಹಾವೀರ್ಯೋ
ಬುದ್ಧಿಮಾನ್ ನೀತಿಮಾನ್ ವಾಗ್ಮೀ
ಶ್ರೀಮಾನ್ ಶತ್ರುನಿಬರ್ಹಣಃ
ವಿಪುಲಾಂಸೋ ಮಹಾಬಾಹುಃ
ಕಂಬುಗ್ರೀವೋ ಮಹಾಹನುಃ

ಇಕ್ಷ್ವಾಕು ವಂಶವಳಿಯಲ್ಲಿ ಹುಟ್ಟಿದ ಹಾಗೂ ಜನರೆಲ್ಲರಿಂದ 'ರಾಮ' ಎಂಬ ಹೆಸರಿನಿಂದ ಕರೆಯಲ್ಪಡುವ ವ್ಯಕ್ತಿಯೊಬ್ಬನಿದ್ದಾನೆ. ಆತ ಸಂಯಮಿ, ವೀರ್ಯವಂತ, ಶೌರ್ಯವಂತ, ಜಿತೇಂದ್ರಿಯ, ಬುದ್ಧಿವಂತ, ನೀತಿವಂತ, ವಾಗ್ಮಿ ದಿವ್ಯವಂತ ಹಾಗೂ ಅರಿಮರ್ದನನಾದ ಆತನು ವಿಶಾಲ ಬಾಹುಗಳನ್ನು ಬಲಯುತವಾದ ಭುಜಗಳನ್ನು, ಶಂಖದಂಥ ಶಿರವನ್ನು ಹೊಂದಿದ ಸುಂದರ ಮುಖದವನಾಗಿದ್ದಾನೆ.

ಮಹೋರಸ್ಕೋ ಮಹೇಶ್ವಾಸೋ
ಗೂಢಜತ್ರುರರಿಂದಮಃ
ಅಜಾನುಬಾಹುಃ ಸುಶಿರಾಃ



ತಿರುಮಲೆ - ತಿರುಪತಿ ದೇವಸ್ಥಾನಗಳು

# ಅಭಿಷೇಕ ಸೇವೆಗಳು

ತಿರುಮಲೆ ತಿರುಪತಿ ದೇವಸ್ಥಾನಗಳ ಆಡಳಿತ ಪರಿಧಿಯ ಆರು ದೇವಾಲಯಗಳಲ್ಲಿ ವಾರಕ್ಕೆ ಒಮ್ಮೆ ನಡೆಯುವ ಅಭಿಷೇಕ ಸಮಯದಲ್ಲಿ ಭಕ್ತರು ಒಬ್ಬರಿಗೆ ೫ ರೂಪಾಯಿನಂತೆ ಶುಲ್ಕ ನೀಡಿ ಅಭಿಷೇಕ ದರ್ಶನ ಹೊಂದಬಹುದು. ವಿವಿಧೆಡೆಗಳಲ್ಲಿರುವ ಈ ದೇವಾಲಯಗಳೆಂದರೆ--

1. ಶ್ರೀ ವೇದನಾರಾಯಣಸ್ವಾಮಿ ಆಲಯ --ನಾಗುಲಾಪುರಂ.

2. ಶ್ರೀ ಕಲ್ಯಾಣ ವೆಂಕಟೇಶ್ವರಸ್ವಾಮಿ ಆಲಯ --ನಾರಾಯಣವನಂ.

3. ಶ್ರೀ ವೇಣುಗೋಪಾಲಸ್ವಾಮಿ ಆಲಯ --ಕಾರ್ವೇಟಿನಗರ.

4. ಶ್ರೀ ಪ್ರಸನ್ನ ವೆಂಕಟೇಶ್ವರಸ್ವಾಮಿ ಆಲಯ --ಅಪ್ಪಲಾಯಗುಂಟ.

5. ಶ್ರೀ ವೆಂಕಟೇಶ್ವರಸ್ವಾಮಿ ಆಲಯ --ಶ್ರೀನಿವಾಸಮಂಗಾಪುರ.

6. ಆಲಯಸಮುದಾಯ --ಹೃಷೀಕೇಶ.

ಭಕ್ತ ಯಾತ್ರಿಕರು ಈ ವಿಶೇಷ ಸೇವೆಯನ್ನು ದರ್ಶಿಸಬೇಕೆಂದು ವಿನಂತಿಸಲಾಗಿದೆ.

ತಿ. ತಿ. ದೇವಸ್ಥಾನಗಳು,
--ತಿರುಪತಿ.

ಸುಲಲಾಟಃ ಸುವಿಕ್ರಮಃ
ಸಮಃ ಸಮ ವಿಭಕ್ತಾಂಗಃ
ಸ್ನಿಗ್ಧವರ್ಣಃ ಪ್ರತಾಪವಾನ್
ಪೀನ ವಕ್ಷಾ ವಿಶಾಲಾಕ್ಷೋ
ಲಕ್ಷ್ಮೀವಾನ್ ಶುಭಲಕ್ಷಣಃ

ಅಲ್ಲದೆ ಹರವಾದ ಎದೆ, ಭಾರವಾದ ಬಿಲ್ಲು, ಆಜಾನುಬಾಹುಗಳುಳ್ಳ ಆತ ಶತ್ರುಗಳನ್ನು ಸದೆಬಡೆಯಬಲ್ಲವನಾಗಿದ್ದು, ತನ್ನ ದೀರ್ಘಬಾಹು, ಸುಶಿರ, ಸುಂದರ ಹಣೆ, ಸಮ ಪ್ರಮಾಣದ ಅಂಗಗಳಿಂದಲೂ, ಸ್ನಿಗ್ಧ ವರ್ಣದಿಂದಲೂ ನೋಡಲು ಸುಂದರನಾಗಿದ್ದಾನೆ. ವಿಕ್ರಮಶಾಲಿಯಾದ ಆತನು ಪ್ರತಾಪಶಾಲಿಯೂ ಹೌದು. ಹರವಾದ ಛಾತಿಯ ಹಾಗೂ ವಿಶಾಲನೇತ್ರದ ಆತ ಸಲ್ಲಕ್ಷಣದಿಂದ ಕೂಡಿದವನಾಗಿದ್ದಾನೆ.

ಧರ್ಮಜ್ಞಃ ಸತ್ಯಸಂಧಶ್ಚ
ಪ್ರಜಾನಾಂ ಚ ಹಿತೇ ರತಃ
ಯಶಸ್ವೀ ಜ್ಞಾನ ಸಂಪನ್ನಃ
ಶುಚಿರ್ವಶ್ಯಃ ಸಮಾಧಿಮಾನ್
ಪ್ರಜಾಪತಿ ಸಮಃ ಶ್ರೀಮಾನ್
ಧಾತಾ ರಿಪು ನಿಷೂದನಃ
ರಕ್ಷಿತಾ ಜೀವಲೋಕಸ್ಯ
ಧರ್ಮಸ್ಯ ಪರಿರಕ್ಷಿತಾ

ಧರ್ಮವನ್ನು ಅರಿತ, ಸತ್ಯವ್ರತಿಯಾದ ಆತ ಯಾವಾಗಲೂ ಪ್ರಜೆಗಳ ಯೋಗಕ್ಷೇಮದಲ್ಲೇ ತಲ್ಲೀನನಾಗಿರುತ್ತಾನೆ. ಯಶಸ್ಕರನಾದ ಅವನು ಜ್ಞಾನ ಸಂಪನ್ನನೂ, ಶುಚಿರ್ಭೂತನೂ ಸೂಕ್ಷ್ಮಮತಿಯೂ ಆಗಿದ್ದಾನೆ. ಆತ ಬ್ರಹ್ಮನಂತೆಯೇ ಇದ್ದು ಸದ್ಗುಣ ಸಂಪನ್ನನಾಗಿದ್ದು ರಿಪು ಮರ್ದಕನಾಗಿದ್ದಾನೆ. ಸಕಲ ಜೀವಿಗಳ ರಕ್ಷಕನಾಗಿದ್ದು ಅವನು ಧರ್ಮರಕ್ಷಕನೂ ಆಗಿದ್ದಾನೆ. ಅಲ್ಲದೆ,

ರಕ್ಷಿತಾ ಸ್ವಸ್ಯ ಧರ್ಮಸ್ಯ
ಸ್ವಜನಸ್ಯ ಚ ರಕ್ಷಿತಾ
ವೇದ ವೇದಾಂಗ ತತ್ತ್ವಜ್ಞೋ
ಧನುರ್ವೇದೇ ಚ ನಿಷ್ಠಿತಃ
ಸರ್ವಶಾಸ್ತ್ರಾರ್ಥ ತತ್ತ್ವಜ್ಞಃ
ಸ್ಮೃತಿಮಾನ್ ಪ್ರತಿಭಾವಾನ್
ಸರ್ವಲೋಕ ಪ್ರಿಯಃ
ಸಾಧುರದೀನಾತ್ಮಾ ವಿಚಕ್ಷಣಃ

ಆತ ಧರ್ಮವನ್ನು ಸರಿಯಾಗಿ ರಕ್ಷಿಸುತ್ತಾನಲ್ಲದೆ ತನ್ನ ಜನರನ್ನು ರಕ್ಷಿಸುತ್ತಿದ್ದಾನೆ. ವೇದೋಪನಿಷತ್ತುಗಳಲ್ಲಿಯ ಜ್ಞಾನವನ್ನೆಲ್ಲ ಅರಿತ ಆತನು ಬಿಲ್ಲು ವಿದ್ಯೆಯಲ್ಲೂ ನಿಷ್ಣಾತನೇ. ಶಾಸ್ತ್ರಗಳನ್ನು ಚೆನ್ನಾಗಿಯೇ ಅಭ್ಯಸಿಸಿರುವ ಆತನು ತೀಕ್ಷ್ಣಮತಿಯೂ ಹಾಗೂ ಉತ್ತಮ ಸ್ಮರಣಶಕ್ತಿಯನ್ನು ಹೊಂದಿರುವನು. ಸರ್ವಜನಪ್ರಿಯನಾಗಿರುವ ಆತನು ಸಾಧುವೂ, ಪವಿತ್ರನೂ ಹಾಗೂ ವಿಚಕ್ಷಣ ಬುದ್ಧಿಯವನೂ ಆಗಿರುವನು.

ಸರ್ವದಾಭಿಗತಃ ಸದ್ಭಿಃ
ಸಮುದ್ರ ಇವ ಸಿಂಧುಭಿಃ
ಆರ್ಯಃ ಸರ್ವ ಸಮಶ್ಚೈವ
ಸದೈವ ಪ್ರಿಯದರ್ಶನಃ
ಸ ಚ ಸರ್ವಗುಣೋಪೇತಃ
ಕೌಸಲ್ಯಾನಂದವರ್ಧನಃ
ಸಮುದ್ರ ಇವ ಗಾಂಭೀರ್ಯೇ
ಧೈರ್ಯೇಣ ಹಿಮವಾನಿವ

ಸಾಧುಜನರು ಯಾವಾಗಲೂ ಇವನನ್ನು ಸುತ್ತುವರೆದಿರುತ್ತಾರೆ. ನದಿಗಳು ಸಮುದ್ರ ಸೇರಲು ತವಕಿಸುವಂತೆ! ಸದಾಕಾಲವೂ ಸರ್ವಜನ ಹಿತಕಾರಿಯೂ, ಸರ್ವಜನ ಪ್ರಿಯನೂ ಆದ ಇವನು ಸರ್ವಗುಣ ಸಂಪನ್ನನಾಗಿದ್ದು ತನ್ನ ತಾಯಿ ಕೌಸಲ್ಯೆಗೆ ಹೆಚ್ಚೆಚ್ಚು ಸಂತೋಷ ನೀಡುವವನಾಗಿದ್ದಾನೆ. ಈ ಶ್ರೀರಾಮನು ಸಮುದ್ರದಂತೆ ಗಂಭೀರ ಸ್ವಭಾವದವನೂ, ಹಿಮಾಲಯದಂತೆ ಧೈರ್ಯಶಾಲಿಯೂ ಆಗಿರುವನು.

ವಿಷ್ಣುನಾ ಸದೃಶೋ ವೀರ್ಯೇ
ಸೋಮವತ್ ಪ್ರಿಯದರ್ಶನಃ
ಕಾಲಾಗ್ನಿ ಸದೃಶಃ ಕ್ರೋಧೇ
ಕ್ಷಮಯಾ ಪೃಥಿವೀ ಸಮಃ
ಧನದೇನ ಸಮಸ್ತ್ಯಾಗೀ
ಸತ್ಯ ಧರ್ಮ ಇವಾ ಪರಃ

ಇಂಥ ಶ್ರೀರಾಮನು ಶೌರ್ಯ, ವೀರ್ಯಗಳಲ್ಲಿ ವಿಷ್ಣುವಿನ ಸಮನೂ, ಸಮಾಧಾನ, ಶಾಂತಿಗಳಲ್ಲಿ ಚಂದ್ರನ ಸಮನೂ, ಸಿಟ್ಟಿನಲ್ಲಿ ಸಾಕ್ಷಾತ್ ಕಾಲಾಗ್ನಿ ಸಮನೂ, ಕ್ಷಮೆಯಲ್ಲಿ ಭೂದೇವಿ ಸಮಾನನೂ ಆಗಿರುವನಲ್ಲದೆ ಸಂಪತ್ತಿನಲ್ಲಿ ಕುಬೇರನ ಸಮನಾಗಿಯೂ, ತ್ಯಾಗ - ಸತ್ಯ ಮುಂತಾದ ಗುಣಗಳಲ್ಲಿ ಯಮಧರ್ಮರಾಜನ ಸಮನಾಗಿಯೂ ಶೋಭಿಸುತ್ತಿರುವನು -ಎಂದು ಶ್ರೀರಾಮನ ಗುಣಗಳನ್ನು ವರ್ಣಿಸುತ್ತಾನೆ.

ಇಂಥ ಸದ್ಗುಣಗಳ ಖನಿಯೇ ಆದ ಶ್ರೀರಾಮ ಮುಂದೆ ಮರ್ಯಾದಾ ಪುರುಷೋತ್ತಮನಾಗಿ ತನ್ನ ಆದರ್ಶ ಗುಣಗಳಿಂದಾಗಿ ಇಂದಿಗೂ ಪೂಜಿಸಲ್ಪಡುವವನಾಗಿ, ಅಸಂಖ್ಯ ಭಕ್ತರ ಆರಾಧ್ಯ ದೈವವಾಗಿರುವುದರಲ್ಲಿ ಅಚ್ಚರಿಯೇನಿಲ್ಲ! ❖

# ಯಾದವಗಿರಿ

(ಮೇಲುಕೋಟೆ) ---ಜಗ್ಗುನರಸಿಂಹಾಚಾರ್.

ಶ್ರಿಯಃಪತಿಯಾದ ಶ್ರೀಮನ್ನಾರಾಯಣನು ಶ್ರೀ ವೈಕುಂಠಲೋಕದಲ್ಲಿ ಅನಂತಗರುಡಾದಿ ನಿತ್ಯ ರಿಂದಲೂ ಮುಕ್ತರಿಂದಲೂ ಸೇವಿತನಾಗಿದ್ದರೂ, ಅಂಡಾನ್ತರ್ವರ್ತಿಗಳಾದ ಬ್ರಹ್ಮಾದಿಗಳಿಗೂ ವಾಙ್ಮ ನಸಾಗೋಚರನಾದುದರಿಂದ ಮನುಷ್ಯಾದಿಗಳೂ ತನ್ನ ದರ್ಶನಾದಿಗಳಿಂದ ಕೃತಾರ್ಥರಾಗದೇಕೆಂಬ ಪರಮ ದಯೆಯಿಂದ ಶ್ರೀ ರಾಮಕೃಷ್ಣಾದಿ ವಿಭವಾ ವತಾರಗಳನ್ನು ಮಾಡಿದ್ದರೂ "ಅವಜಾನನ್ತಿಮಾಂ ಮೂಢಾ ಮಾನುಷೀಂ ತನುಮಾಶ್ರಿತಂ" ಎಂಬಂತೆ ಅಂಥವನಲ್ಲಿಯೂ ಭಕ್ತಿಮಾಡದಿರುವ ನಮ್ಮಂಥವ ರನ್ನೂ ವಶಮಾಡಿಕೊಳ್ಳುವುದಕ್ಕೋಸ್ಕರ ಅರ್ಚಾವ ತಾರವನ್ನು ಪರಿಗ್ರಹಿಸಿ ಈ ಯಾದವಗಿರಿ (ಮೇಲು ಕೋಟೆ)ಯಲ್ಲಿ ಶ್ರೀ ರಾಮಾನುಜಾಚಾರ್ಯರಿಂದ ಸೇವಿಸಲ್ಪಡುತ್ತಾ ಈಗಲೂ ಎಲ್ಲರನ್ನೂ ಕೃತಾರ್ಥರ ನ್ನಾಗಿ ಮಾಡುತ್ತಾ ಶ್ರೀ ಚೆಲುವ ತಿರುನಾರಾಯಣ ನಾಗಿ ಬಿಜಯಮಾಡಿಸಿದ್ದಾನೆ.

## ಕಥಾ ಪ್ರಾರಂಭ

ಪೂರ್ವದಲ್ಲಿ ಕಲಿಯುಗಾರಂಭವಾದಾಗ ವ್ಯಾಸರೇ ಮುಂತಾದ ಅನೇಕ ಮಹರ್ಷಿಗಳು, ಕಲಿ ಪ್ರವೇಶವಿಲ್ಲದಿರುವ ಕ್ಷೇತ್ರವನ್ನು ತಿಳಿಯುವುದಕ್ಕೋ ಸ್ಕರ ಉತ್ತರ ಬದರಿಕಾಶ್ರಮಕ್ಕೆ ಹೋಗಿ ಅಲ್ಲಿ ನಾರಾ ಯಣ ಮಹರ್ಷಿಗಳನ್ನು ಪ್ರಶ್ನೆಮಾಡಿ ಅವರಿಂದ ಸಂಗ್ರಹವಾಗಿ ಹೇಳಲ್ಪಟ್ಟ ಯಾದವಗಿರಿ ಮಾಹಾ ತ್ಮ್ಯವನ್ನು ಕೇಳಿ ಇದನ್ನು ವಿಸ್ತಾರವಾಗಿ ಹೇಳದೇ ಕೆಂದು ಪುನಃ ಕೇಳಲು, ಆ ನಾರಾಯಣ ಮಹ ರ್ಷಿಯು "ನಾರದರು ವಿಸ್ತಾರವಾಗಿ ಹೇಳುತ್ತಾರೆ" ಎಂದು ಹೇಳಿ ಅಂತರ್ಧಾನಹೊಂದಲು ಆಗಲೇ ಅಲ್ಲಿಗೆ ಬಂದ ನಾರದರನ್ನು ಕೇಳಿದರು. ಆಗ ನಾರ ದಮಹರ್ಷಿಯು ವ್ಯಾಸಾದಿಗಳನ್ನು ಕುರಿತು ವಿಸ್ತಾರ ವಾಗಿ ಯಾದವಗಿರಿ ಮಹಾತ್ಮ್ಯವನ್ನು ಹೇಳಲಾರಂ ಭಿಸಿದರು.

ಸರ್ವಸ್ವಾಮಿಯಾದ ಶ್ರಿಯಃಪತಿಯು ಪ್ರಳಯ ಕಾಲದಲ್ಲಿ ಎಲ್ಲಾ ಜೀವಾತ್ಮವರ್ಗಗಳೂ ಜ್ಞಾನ ವುಳ್ಳವಾಗಿದ್ದರೂ ಶರೀರೇಂದ್ರಿಯಗಳು ಇಲ್ಲದುದ ರಿಂದ ಅಚೇತನಗಳಂತಿರುವುದನ್ನು ನೋಡಿ ತನ್ನ ಪರಮ ಕೃಪೆಯಿಂದ ಅವುಗಳಿಗೆ ಶರೀರೇಂದ್ರಿಯ ಗಳನ್ನು ಕೊಟ್ಟು ಸೃಷ್ಟಿಸುವುದಕ್ಕೋಸ್ಕರ ಮೊದಲು ತನ್ನ ನಾಭಿಕಮಲದಲ್ಲಿ ಚತುರ್ಮುಖ ಬ್ರಹ್ಮನನ್ನು ಸೃಷ್ಟಿಸಿ ಅವನಿಗೆ ಪ್ರಣವ, ಅಷ್ಟಾಕ್ಷರ, ನಾಲ್ಕುವೇದ ಗಳು ಇವುಗಳನ್ನೆಲ್ಲಾ ಉಪದೇಶಿಸಿ, "ಇವರಂತೆ ಜಗ ತ್ತೆಲ್ಲವನ್ನೂ ಸೃಷ್ಟಿಸು" ಎಂದು ಅಪ್ಪಣೆ ಮಾಡಿದನು.

ಅನಂತರ ಚತುರ್ಮುಖನು ಅದೆಲ್ಲವನ್ನೂ ಆವೃ ತ್ತಿಮಾಡುತ್ತಾ ಆ ವೇದಾರ್ಥಗಳನ್ನು ಭಾವಿಸುತ್ತಾ ಪೂರ್ವ ಕಲ್ಪದಂತೆಯೇ ಸುರ, ನರ, ತಿರ್ಯಕ್, ಸ್ಥಾವ ರವೆಂಬ ಚತುರ್ವಿಧ ಪ್ರಾಣಿಗಳನ್ನೂ ಸೃಷ್ಟಿಸಿ, ತಾನು ನಿತ್ಯವೂ ಆರಾಧಿಸುವುದಕ್ಕಾಗಿ ಭಗವದಭಿಮತ ವಾದ ಅರ್ಚಾಮೂರ್ತಿಯು ಬೇಕೆಂದು ಧ್ಯಾನಮಾ ಡುತ್ತಿರುವಾಗಲೇ ಕಿವಿಗಳಿಗೆ ಇಂಪಾದ ವಾದ್ಯಗಳ ಧ್ವನಿಯನ್ನು ಕೇಳಿ ಕಣ್ಣುಬಿಟ್ಟು ನೋಡಿದಾಗ ಆನಂ ದಮಯ ದಿವ್ಯವಿಮಾನವು ಕಾಣಿಸಿತು. (ಇದೇ ತಿರು ನಾರಾಯಣಸ್ವಾಮಿಯವರ ವಿಮಾನ)

ಮುಂದೆ ವಾದ್ಯಗಾರರನ್ನೂ, ಅವರ ಹಿಂದೆ ಗೋಷ್ಠಿಯನ್ನೂ, ಅದನ್ನು ವಿಂಗಡಿಸುವ ಚಿನ್ನದ ದೊಣ್ಣೆಗಳನ್ನು ಹಿಡಿದಿರುವ ದಂಡಿಗಳನ್ನೂ, ಅವರ ಹಿಂದೆ ಅನನ್ತ, ಗರುಡ, ವಿಷ್ವಕ್ಸೇನ ಮುಂತಾದ ನಿತ್ಯ ಸೂರಿಗಳನ್ನೂ ಛತ್ರ, ಚಾಮರ, ಬೀಸಣಿಗೆ ಮೊದ ಲಾದ ಉಪಚಾರ ಮಾಡುವವರನ್ನೂ, ಅನಂತರ ಆನಂದಮಯ ದಿವ್ಯವಿಮಾನವನ್ನೂ, ಅದರ ಬಲ ಪಾರ್ಶ್ವದಲ್ಲಿ ಸುದರ್ಶನ ಮೂರ್ತಿಯನ್ನೂ ಎಡಪಾ ರ್ಶ್ವದಲ್ಲಿ ಲಕ್ಷ್ಮೀದೇವಿಯನ್ನೂ ಮಧ್ಯದಲ್ಲಿ ಶ್ರೀ ನಾರಾ ಯಣಸ್ವಾಮಿಯವರನ್ನೂ ದರ್ಶನ ಮಾಡಿದನು.

ಬ್ರಹ್ಮನು ಹೀಗೆ ತಾನು ಯೋಚಿಸುತ್ತಿದ್ದಾಗಲೇ ತನ್ನಿಷ್ಟವಿದ್ದಂತೆ ವೈಕುಂಠಲೋಕದಿಂದ ದಯ ಮಾಡಿಸಿರುವ ಅರ್ಚಾಮೂರ್ತಿಯಾದ ನಾರಾಯ ಣನನ್ನು ದರ್ಶನಮಾಡಿ ಆನಂದ ಸಮುದ್ರದಲ್ಲಿ ಮುಳುಗಿ ಸ್ವಲ್ಪ ಸಮಾಧಾನ ಮಾಡಿಕೊಂಡು ಕುಣಿ ಯುವುದು, ಓಡುವುದು, ಬರುವುದು, ಉತ್ತರೀಯ ವನ್ನು ಮೇಲಕ್ಕೆ ಎಸೆಯುವುದು, ನಗುವುದು, ಆನಂ ದಭಾಷ್ಪವನ್ನು ಸುರಿಸುವುದು, ಸ್ತೋತ್ರ ಮಾಡು ವುದು, ಹೀಗೆ ಮಾಡಿ, ಆನಂದಮಯ ದಿವ್ಯವಿಮಾನ ವನ್ನು ವಿಶ್ವಕ್ಸೇನರಿಂದ ಬಿಜಯಮಾಡಿಸಿಕೊಂಡು ಆ ನಾರಾಯಣಸ್ವಾಮಿಯನ್ನು ತನ್ನ ಧರ್ಮಪತ್ನಿಯಾದ ಸರಸ್ವತಿಯೊಡನೆ ಕೂಡಿ ಅನೇಕ ಕಲ್ಪಗಳವರೆಗೂ ಆರಾಧಿಸುತ್ತಿದ್ದನು.

ಹೀಗಿರುವಲ್ಲಿ ಚತುರ್ಮುಖನ ಮಗನಾಗಿಯೂ ಶಿಷ್ಯನಾಗಿಯೂ ಇರುವ ಸನತ್ಕುಮಾರರು ಈ ಆನಂದಮಯ ದಿವ್ಯವಿಮಾನ ಮಧ್ಯಸ್ಥರಾದ, ನಾರಾ ಯಣಸ್ವಾಮಿಯನ್ನು ಭೂಲೋಕದಲ್ಲಿ ತಾನು ಆರಾ ಧಿಸುವುದಕ್ಕೋಸ್ಕರ ಬ್ರಹ್ಮನನ್ನು ಪ್ರಾರ್ಥಿಸಲು, ಆ ನಾರಾಯಣನ ಅಪ್ಪಣೆಯ ಪ್ರಕಾರವೇ ಚತುರ್ಮು ಖನು ಬಿಜಮಾಡಿಸಿಕೊಡಲು, ಸನತ್ಕುಮಾರರು, ಆ ಸತ್ಯಲೋಕದಿಂದ ಮೇರುಪರ್ವತಕ್ಕೂ ಅಲ್ಲಿಂದ ಕೈಲಾಸಪರ್ವತಕ್ಕೂ ಅಲ್ಲಿಂದ ಹಿಮವತ್ಪರ್ವತಕ್ಕೂ, ಅಲ್ಲಲ್ಲಿರುವ ದೇವತಾದಿಗಳಿಂದ ಪ್ರದಕ್ಷಿಣ ನಮಸ್ಕಾ ರಗಳಿಂದ ಪೂಜಿಸಲ್ಪಟ್ಟ ವಿಮಾನವನ್ನು ಬಿಜಯ ಮಾಡಿಸಿಕೊಂಡು ಬಂದರು.

ಆ ಹಿಮವತ್ಪರ್ವತದಲ್ಲಿ ಉತ್ತರ ಬದರಿಕಾ ಶ್ರಮದಲ್ಲಿ ಮೂರು ದಿವಸ ಆರಾಧಿಸುತ್ತಿದ್ದು ಅಲ್ಲಿಂದ ದಕ್ಷಿಣದಿಕ್ಕಿಗೆ ಹೊರಟು, ಚತುರ್ಮುಖ ನಿಂದ ಮೊದಲು ಹೇಳಲ್ಪಟ್ಟಿದ್ದ ಕಲ್ಯಾಣತೀರ್ಥ, ಅಷ್ಟತೀರ್ಥಗಳು, ಸಪ್ತಕ್ಷೇತ್ರಗಳು, ಇವುಗಳಿಂದ ಪಾವನವಾದ ವೇದಪರ್ವತವೆಂದು ಪ್ರಸಿದ್ಧವಾದ ಯಾದವಗಿರಿಯಲ್ಲಿ ಭೂಮಿಯಲ್ಲಿ ಪೂರ್ವಾಭಿಮು ಖವಾಗಿ ಶಾಸ್ತ್ರಪ್ರಕಾರ ವಿಮಾನವನ್ನು ಸ್ಥಾಪಿಸಿದರು.

ಯಾವ ಯಾದವಗಿರಿಯು ಸತ್ಯಪರ್ವತಕ್ಕೆ ಪೂರ್ವ ದಲ್ಲಿಯೂ, ಕಾವೇರೀ ನದಿಗೆ ಉತ್ತರದಲ್ಲಿಯೂ ಇದ್ದು ಅನೇಕ ಶಿಖರಗಳಿಂದೊಡಗೂಡಿ ಸಾಕ್ಷಾ ಚ್ಛೇಷ ರೂಪಿಯಾಗಿದ್ದು, ಭಗವಂತನಿಗೆ ವೈಕುಂಠ ಕ್ಕಿಂತಲೂ ಅತ್ಯಂತ ಪ್ರೀತಿಪಾತ್ರವಾಗಿಯೂ, ದಕ್ಷಿಣ ಬದರಿಕಾಶ್ರಮವೆಂದಲೂ, ಸುತ್ತಲೂ ಎರಡು ಯೋಜನವರೆಗೂ ವೈಕುಂಠ ವರ್ಧನಕ್ಷೇತ್ರವೆಂದು ಪ್ರಸಿದ್ಧವಾಗಿಯೂ, ಅಷ್ಟಾಕ್ಷರ ಮಂತ್ರ ಪ್ರತಿಪಾದ್ಯ ದೇವತೆಯಾದ ಶ್ರೀಮನ್ನಾರಾಯಣನಿಗೆ ಆಶ್ರ ಯವಾಗಿಯೂ ಇದೆಯೋ, ಮತ್ತು ಪೂರ್ವದಲ್ಲಿ ದತ್ತಾತ್ರೇಯರು ಈ ಪರ್ವತದಲ್ಲಿ ವೇದಗಳನ್ನು ಪ್ರವಚನ ಮಾಡಿದ್ದರಾದ್ದರಿಂದ ವೇದಪರ್ವತವೆಂ ತಲೂ, ಇಲ್ಲಿ ಶ್ರೀ ನಾರಾಯಣನ ಸಾನ್ನಿಧ್ಯ ಉಂಟಾದ ಮೇಲೆ ನಾರಾಯಣಾದ್ರಿ ಎಂತಲೂ, ದ್ವಾಪರಯು ಗದ ಕೊನೆಯಲ್ಲಿ ಯಾದವರು ಬಂದು ಸೇವಿಸುತ್ತಿದ್ದ ರಾದ್ದರಿಂದ ಯಾದವಗಿರಿ ಎಂತಲೂ ಈ ಪರ್ವತಕ್ಕೆ ಹೆಸರುಂಟಾಯಿತು. ಕಲಿಯುಗದಲ್ಲಿ ಆದಿಶೇಷಾಂ ಶಭೂತರಾದ ಒಬ್ಬ ಯತಿಯು ಜೀರ್ಣೋದ್ಧಾರ ಮಾಡಿ ಸೇವಿಸೋಣದರಿಂದ ಯತಿಶೈಲವೆಂಬ ಹೆಸ ರುಂಟಾಗುವುದು. ಇಂತಹ ಆ ಗಿರಿ (ಮೇಲು ಕೋಟೆ)ಯಲ್ಲಿ ಸನತ್ಕುಮಾರರು ಶ್ರೀಮನ್ನಾರಾಯ ಣನ ವಿಮಾನವನ್ನು ಸ್ಥಾಪಿಸಿದರೆಂದು ನಾರದರು ವ್ಯಾಸಾದಿ ಮಹರ್ಷಿಗಳಿಗೆ ಅಪ್ಪಣೆ ಕೊಡಿಸಿದರು.

Statement about ownership and other particulars about
**SAPTHAGIRI**
(MONTHLY)
FORM IV
*See Rule 8*

| | | |
|---|---|---|
| 1. Place of Publication | : | TIRUPATI |
| 2. Periodicity of its Publication | : | Monthly |
| 3. Honorary Editor | : | N. Ramesh Kumar, I.A.S., Executive Officer, T.T.D. |
| 4. Printer's Name | : | Sri P. Mohan Rao |
| Whether citizen of India | : | Yes |
| Address | : | Manager T.T.D. Press, Tirupati |
| 5. Editor & Publisher's Name | : | Sri N.S. Ramamurthy, M.A., |
| Whether citizen of India | : | Yes |
| Address | : | Editor, Sapthagiri T.T.D. Journal, Tirupati |
| 6. Name and address of Individuals who own the Newspaper and partners or shareholders holding more than one percent of the Total Capital | } | Board of Trustees represented by the Executive Officer on behalf of T.T.D., Tirupati |

*I, N.S. Ramamurthy, hereby declare that the particulars given above are true to the best of my knowledge and belief.*

TIRUPATI
Date : 29-2-1996

(Sd.) N.S. RAMAMURTHY
*Signature of the Publisher*


ಬ್ರಹ್ಮನು ತನ್ನ ಮಗನಾದ ಸನತ್ಕುಮಾರರಿಗೆ ಶ್ರೀಮನ್ನಾರಾಯಣನನ್ನು ಬಿಜಮಾಡಿಸಿ ಕೊಡುವಾಗ ನಾರಾಯಣನ ಅಗಲಿಕೆಯಿಂದ ಖಿನ್ನನಾಗಲು ನಾರಾಯಣನು ತನ್ನ ಹೃದಯದಿಂದ ಶ್ರೀ - ಭೂಸಹಿತವಾದ ಮತ್ತೂ ಒಂದು ಮೂರ್ತಿಯನ್ನು (ಚೆಲುವ ನಾರಾಯಣ ಸ್ವಾಮಿಯನ್ನು) ಸೃಷ್ಟಿಸಿ ಬ್ರಹ್ಮನಿಗೆ ಆರಾಧಿಸಲು ಬಿಜಮಾಡಿಸಿ ಕೊಟ್ಟನು. ಅದು ಮೊದಲು ಬ್ರಹ್ಮನು ಆ ಚೆಲುವರಾಯ ಸ್ವಾಮಿಯನ್ನೇ ಬಹಳ ದಿವಸ ಆರಾಧಿಸಿಕೊಂಡಿದ್ದು ಒಂದು ಕಾಲದಲ್ಲಿ (ಅಂದರೆ) ಶ್ರೀರಾಮನು ವಿಭೀಷಣನಿಗೆ ತನ್ನ ಮನೆದೇವರಾದ ಶ್ರೀರಂಗನಾಥನನ್ನು ಆರಾಧನಕ್ಕೆ ಬಿಜಮಾಡಿಸಿಕೊಟ್ಟು ತನಗೆ ಆರಾಧನಕ್ಕೆ ಅರ್ಚಾಮೂರ್ತಿಯಿಲ್ಲದೆ ಖಿನ್ನನಾದಾಗ ಈ ಚೆಲುವರಾಯಸ್ವಾಮಿಯನ್ನು ಶ್ರೀರಾಮನಿಗೆ ಬ್ರಹ್ಮನು ಬಿಜಮಾಡಿಸಿಕೊಟ್ಟನು. ಅದು ಮೊದಲು ಚೆಲುವರಾಯಸ್ವಾಮಿಗೆ ರಾಮಪ್ರಿಯನೆಂದು ಹೆಸರು ಪ್ರಸಿದ್ಧವಾಯಿತು.

ಶ್ರೀರಾಮನು ಸರಯೂ ನದಿಯ ಮೂಲಕ ಅಯೋಧ್ಯಾವಾಸಿಗಳಾದ ಸಕಲ ಚರಾಚರಗಳೊಡನೆ ಪರಂಧಾಮವನ್ನು ಹೊಂದಿದಾಗ ಈ ಚೆಲುವರಾಯಸ್ವಾಮಿಯನ್ನು ಆಂಜನೇಯನ ಕೈಯಲ್ಲೊ, ಆಂಜನೇಯನು ಕುಶಮಹಾರಾಜನಿಗೂ, ಕುಶಮಹಾರಾಜನು ತನ್ನ ಮಗಳಾದ 'ಕನಕಮಾಲಿನೀ' ಎಂಬವಳಿಗೆ ಬಳುವಳಿಯಾಗಿಯೂ ಬಿಜಮಾಡಿಸಿ ಕೊಟ್ಟರು. ಆ ಕನಕಮಾಲಿನಿಯು ಯದುಕುಲದ ಯದುಶೇಖರನಿಗೆ ಮದುವೆಯಾದ್ದರಿಂದ ಈ ಚೆಲುವರಾಯಸ್ವಾಮಿಯು ಆ ಯದುಕುಲದ ದೊರೆಗಳಿಂದ ಕ್ರಮವಾಗಿ ಆರಾಧಿಸಲ್ಪಡುತ್ತಿದ್ದು, ಆ ವಂಶದಲ್ಲಿ ಅವತರಿಸಿದ ಶ್ರೀಕೃಷ್ಣನ ಅತಿಮಾನುಷವಾದ ಚರಿತ್ರಗಳನ್ನು ನೋಡುತ್ತಾ ಶ್ರೀಕೃಷ್ಣನ ಮನೆಯಲ್ಲೇ ಬಿಜಮಾಡಿಸಿದ್ದರು.

## ವೈರಮುಡಿ ಕಿರೀಟ ವೃತ್ತಾಂತ

ಒಂದು ಕಾಲದಲ್ಲಿ ಪ್ರಹ್ಲಾದನ ಮಗನಾದ ವಿರೋಚನನು ಎಲ್ಲರಿಗೂ ತನ್ನ ತಂದೆಯಲ್ಲಿದ್ದ ವಿಶ್ವಾಸದಿಂದ ನಿತ್ಯಸೂರಿಗಳೊಡಗೂಡಿ ಕ್ಷೀರಾಬ್ಧಿಶಾಯಿಯಾದ ಅನಿರುದ್ಧ ಭಗವಂತನನ್ನು ಸೇವಿಸುತ್ತಿದ್ದು, ಭಗವಂತನ ಯೋಗ ನಿದ್ರಾಕಾಲದಲ್ಲಿ ಯಾರೂ ಇಲ್ಲದ ಸಮಯದಲ್ಲಿ ಆ ಭಗವಂತನ ಕಿರೀಟವನ್ನು ಅಪಹರಿಸಿಕೊಂಡು ಪಾತಾಳಕ್ಕೆ ಹೊರಟುಹೋದನು. ಅನಂತರ ಬಂದು ನೋಡಿದ ಅಂತರಂಗ ಭಕ್ತರು ಭಗವಂತನ ಕಿರೀಟವನ್ನು ಕಾಣದೆ "ಇದು ವಿರೋಚನನ ಕೆಲಸವೇ ಸರಿ" ಎಂದು ಊಹಿಸಿ ಗರುಡನೊಡನೆ ಹೇಳಲು, ಗರುಡನು ಪಾತಾಳಕ್ಕೆ ಹೋಗಿ ವಿರೋಚನನನ್ನು ಜಯಿಸಿ ಅನಿರುದ್ಧ ಕಿರೀಟವನ್ನು ತೆಗೆದುಕೊಂಡು ಮಹಾವೇಗದಿಂದ ಬರುತ್ತಿದ್ದನು.

ಗರುಡನು ಹೀಗೆ ಆಕಾಶಮಾರ್ಗದಲ್ಲಿ ಬರುತ್ತಿರುವಾಗ ಅಂತಹ ತನ್ನ ವೇಗವೂ ನಿಂತುಹೋದುದನ್ನು ನೋಡಿ ಆಶ್ಚರ್ಯಪಟ್ಟು ಎಲ್ಲಾ ಕಡೆಯಲ್ಲೂ ನೋಡಿ ಏನೂ ಕಾಣದೆ ಭೂಭಾಗದಲ್ಲಿ ನೋಡಿದಾಗ ನವಿಲುಗರಿಗಳಿಂದಲೂ, ಗುಲಗಂಜಿ ಮಣಿಗಳ ಸರಗಳಿಂದಲೂ ಅಲಂಕೃತನಾಗಿ ವೇಣುಗಾನ ಮಾಡುತ್ತಾ ಬೃಂದಾವನದಲ್ಲಿ ಗೋವುಗಳನ್ನು ಕಾಯುತ್ತಿದ್ದ ಶ್ರೀಕೃಷ್ಣನನ್ನು ದರ್ಶನ ಮಾಡಿ ಬಹಳ ಹರ್ಷದಿಂದ "ಈ ಕಾರಣದಿಂದಲೇ ತನ್ನ ಗತಿ ಭಂಗವಾಯಿತು" ಎಂದು ನಿಶ್ಚಯಿಸಿ ಭಗವದಭಿಪ್ರಾಯದಂತೆ ಆ ಕಿರೀಟವನ್ನು ಶ್ರೀಕೃಷ್ಣನ ಶಿರಸ್ಸಿನಲ್ಲಿ ಧಾರಣೆಮಾಡಿ ಪ್ರದಕ್ಷಿಣ ನಮಸ್ಕಾರಾದಿಗಳನ್ನು ಮಾಡಿ ಕ್ಷೀರಾಬ್ಧಿಗೆ ಹೋಗಿ ನಡೆದ ವೃತ್ತಾಂತವೆಲ್ಲವನ್ನೂ ಹೇಳಲು ಭಗವಂತನೂ, ನಿತ್ಯಸೂರಿಗಳೂ ಶ್ಲಾಘಿಸಿದರು. ಆದರೆ ಆ ಅನಿರುದ್ಧ ಭಗವಂತನ ಬಹಳ ದೊಡ್ಡದಾದ ಆ ಕಿರೀಟವು ಶ್ರೀಕೃಷ್ಣನಿಗೆ ಸಮರ್ಪಿಸಲ್ಪಟ್ಟಾಗ ಅವನಿಗೆ ತಕ್ಕ ಅಳತೆಯುಳ್ಳದ್ದಾಗಿ ಆಯಿತು. ಇದು ಭಗವಂತನ ಇಚ್ಛೆ, ಆ ಕಿರೀಟದ ಮಹಿಮೆ.

ಶ್ರೀಕೃಷ್ಣನೂ ಕೂಡ ತನ್ನ ಮನೆದೇವರಾದ ಚೆಲುವರಾಯಸ್ವಾಮಿಯ ಶಿರಸ್ಸಿಗೆ ಧಾರಣೆ ಮಾಡಲು ಅವರ ಶಿರಸ್ಸಿಗೆ ತಕ್ಕಂತೆ ಒಪ್ಪಲು ನಿತ್ಯವೂ ಪೂಜೆ ಮಾಡುತ್ತಿದ್ದನು. ಹೀಗಿರುವಾಗ ಒಂದು ಕಾಲದಲ್ಲಿ ಬಲರಾಮನು ತೀರ್ಥಯಾತ್ರಾಪ್ರಸಂಗದಿಂದ ಈ ನಾರಾಯಣಾದ್ರಿಗೆ ಬಂದು ಕಲ್ಯಾಣೀ ತೀರದಲ್ಲಿ ಆನಂದಮಯ ದಿವ್ಯವಿಮಾನ ಮಧ್ಯಸ್ಥರಾದ ತಿರುನಾರಾಯಣಸ್ವಾಮಿಯವರನ್ನು ದರ್ಶನ ಮಾಡಿ ತನ್ನ ಮನೆ ದೇವರಾದ ಚೆಲುವರಾಯಸ್ವಾಮಿಯ ಹಾಗೆಯೇ ಇದ್ದಾರೆಂದು ತಿಳಿದನು.

ಅನಂತರ ಬಲರಾಮನು ದ್ವಾರಕೆಗೆ ಹೋಗಿ "ದಕ್ಷಿಣದೇಶದಲ್ಲಿರುವ ನಾರಾಯಣಾದ್ರಿ ಎಂಬಲ್ಲಿ ನಮ್ಮ ಚೆಲುವರಾಯಸ್ವಾಮಿಯ ಹಾಗೆಯೇ ಒಬ್ಬ ನಾರಾಯಣ ಮೂರ್ತಿಯು ಇದ್ದಾರೆ" ಎಂದು ಹೇಳಿದನು. ಕೃಷ್ಣನು ಅದನ್ನು ಒಪ್ಪಲಿಲ್ಲ. ಅನಂತರ ಬಲರಾಮನು ಕೃಷ್ಣನನ್ನೂ ಇತರ ಯಾದವರನ್ನೂ ಕರೆದುಕೊಂಡು ಚೆಲುವರಾಯಸ್ವಾಮಿಯವರನ್ನೂ ಬಿಜಮಾಡಿಸಿಕೊಂಡು ಬಂದು ನಾರಾಯಣಾದ್ರಿಯಲ್ಲಿ ಶ್ರೀ ನಾರಾಯಣಸ್ವಾಮಿಯವರ ಮುಂದುಗಡೆ ಬಿಜಮಾಡಿಸಿ ಎಲ್ಲರೂ ದರ್ಶನ ಮಾಡಿದಾಗ

ಈ ಎರಡು ಮೂರ್ತಿಗಳೂ ಒಂದೇ ರೂಪವುಳ್ಳವರೆಂದು ಎಲ್ಲರೂ ಒಪ್ಪಿದರು.

ಅನಂತರ ಸಕಲ ಯಾದವರೂ ಚೆಲುವರಾಯ ಸ್ವಾಮಿಯನ್ನು ಅಲ್ಲಿಯೇ ಬಿಜಮಾಡಿಸಿ ಆಯಾಯ ಕಾಲಗಳಲ್ಲಿ ಅಲ್ಲಿಗೇ ಹೋಗಿ ಆಯಾಯ ಉತ್ಸವಗಳನ್ನು ಅತ್ಯಂತ ವಿಜೃಂಭಣೆಯಿಂದ ನಡೆಸಿ ದರ್ಶನಮಾಡಿ ಕೃತಾರ್ಥರಾಗುತ್ತಾ ಬರುತ್ತಿದ್ದರಾದುದರಿಂದ ಇದಕ್ಕೆ 'ಯಾದವಾದ್ರಿ' ಎಂದು ಅದು ಮೊದಲು ಹೆಸರಾಯಿತು. ಹೀಗೆ ನಾರಾಯಣಸ್ವಾಮಿಯೂ, ಚೆಲುವರಾಯ ಸ್ವಾಮಿಯೂ, ಮೂಲ ವಿಗ್ರಹವಾಗಿಯೂ, ಉತ್ಸವ ವಿಗ್ರಹವಾಗಿಯೂ, ಒಂದು ಕಡೆ ಬಿಜಮಾಡಿಸಿದ್ದು ನಮ್ಮಂಥವರ ಭಾಗ್ಯಾತಿಶಯದಿಂದ.

## ಕಲ್ಯಾಣೀತೀರ್ಥ :

ಆದಿವರಾಹಮೂರ್ತಿಯು ಭೂದೇವಿಯನ್ನು ಎತ್ತಿಕೊಂಡು ಬಂದಾಗ ಶ್ರಮದಿಂದ ಅವನ ಸರ್ವಾಂಗಗಳಿಂದಲೂ ದ್ರವಿಸಿದ ದೆವರು ನೀರು 'ಕಲ್ಯಾಣೀ' ಎಂಬ ತೀರ್ಥವಾಯಿತು. ಸ್ನಾನಾದಿಗಳಿಂದ ಎಲ್ಲರ ಪಾಪವನ್ನು ಪರಿಹರಿಸುವ ಗಂಗಾನದಿಯು ಸಕಲ ತೀರ್ಥಗಳೊಡನೆ ಕೂಡಿ ತನ್ನ ಪಾಪವನ್ನು ಪರಿಹರಿಸಿಕೊಳ್ಳುವುದಕ್ಕೋಸ್ಕರ ಪ್ರತಿವರ್ಷವೂ ಫಾಲ್ಗುನ ಮಾಸದಲ್ಲಿ ಈ ಕಲ್ಯಾಣೀ ತೀರ್ಥದಲ್ಲಿ ವಾಸಮಾಡುವಳು. ಇದರ ತೀರದಲ್ಲಿ ಮಾಡಿದ ತಪೋದಾನಾದಿ ಪುಣ್ಯಕಾರ್ಯಗಳು ಇತರ ಕಡೆಗಳಲ್ಲಿ ತಾವು ಕೊಡತಕ್ಕ ಫಲಕ್ಕಿಂತಲೂ ಬಹಳ ಭಾಗ ಅಧಿಕವಾಗಿ ಕೊಡುವುವು.

ಈ ತೀರ್ಥಕ್ಷೇತ್ರಗಳ ಮಹಿಮೆಯನ್ನು ತೋರಿಸುವುದಕ್ಕೆ ಸುಚರಿತನೆಂಬ ಬ್ರಾಹ್ಮಣನ ಕಥೆ.

ಯಾವಾಗಲೂ ತೀರ್ಥಕ್ಷೇತ್ರಾದಿ ಯಾತ್ರಾಪರನಾಗಿಯೂ ಮುದುಕನಾಗಿಯೂ ದರಿದ್ರನಾಗಿಯೂ ಇದ್ದ ಸುಚರಿತನೆಂಬ ಒಬ್ಬ ಬ್ರಾಹ್ಮಣನಿದ್ದನು. ಅವನು ಯದುಗಿರಿಯನ್ನೂ ಕಲ್ಯಾಣಿಯನ್ನೂ ನೋಡಿಯೂ ಕೇಳಿಯೂ ಇರಲಿಲ್ಲ. ಇಂತಹ ಬ್ರಾಹ್ಮಣನು ಇಬ್ಬರು ಗಂಡುಮಕ್ಕಳೊಡನೆಯೂ ಹೆಂಡತಿಯೊಡನೆಯೂ ಸ್ನಾನಾರ್ಥವಾಗಿ ಗಂಗಾನದಿಗೆ ಹೋದನು. ಆದರೆ ಗಂಗಾನದಿಯು ಇವನ ಕಣ್ಣಿಗೆ ಗೋಚರವಾಗಲಿಲ್ಲ.

ಗಂಗಾನದಿಯಲ್ಲಿ ಸ್ನಾನಪಾನಾದಿಗಳನ್ನು ಮಾಡುತ್ತಿದ್ದವರು "ಇಗೋ, ಇದೇ ಗಂಗಾನದಿ" ಎಂದು ಹೇಳಿದರೂ ಈ ಸುಚರಿತನು ಗಂಗೆಯನ್ನು ಕಾಣದೆ ಇದ್ದುದರಿಂದ ಬಹಳ ದುಃಖದಿಂದ ಅತ್ತನು. ಆಗ ಒಬ್ಬ ಕನ್ಯೆಯು ಬಂದು "ಎಲೈ ಬ್ರಾಹ್ಮಣನೇ, ಕಲ್ಯಾಣೀತೀರ್ಥದಲ್ಲಿ ಸ್ನಾನಮಾಡಿದೆಯಾ?" ಎಂದು ಕೇಳಿದಳು. ಅದಕ್ಕೆ ಬ್ರಾಹ್ಮಣನು "ಅದರ ಹೆಸರನ್ನೇ ಕೇಳಲಿಲ್ಲ" ಎಂದನು. ಕನ್ಯೆಯು "ಆದರೆ ಅಲ್ಲಿ ಹೋಗಿ ಸ್ನಾನ ಮಾಡಿ ಬಾ" ಎಂದಳು. ಬ್ರಾಹ್ಮಣನು "ನನಗೆ ಶಕ್ತಿಯೂ ಇಲ್ಲ. ಅಲ್ಲಿಗೆ ಹೋಗಿ ಪುನಃ ಇಲ್ಲಿಗೆ ಬರುವುದಕ್ಕೆ ಏನು ಭರವಸೆ?" ಎಂದನು. ಕನ್ಯೆಯು ಆದರೆ 'ಕಲ್ಯಾಣಿ' ಎಂದು ಮೂರಾವರ್ತಿ ನೀವು ನಾಲ್ಕು ಮಂದಿಯೂ ಹೇಳಿ ಈ ಗಂಗಾನದಿಯಲ್ಲಿ ಸ್ನಾನ ಮಾಡಿರಿ" ಎಂದಳು.

ಹೀಗೆ ಕನ್ಯಾರೂಪಿಣಿಯಾದ ಗಂಗಾನದಿಯ ಸಂಭಾಷಣವಾದ ಮೇಲೆ ಗಂಗಾನದಿಯನ್ನು ಕಂಡು ಹೃಷ್ಟನಾಗಿ 'ಕಲ್ಯಾಣಿ' ಎಂದು ಮೂರಾವರ್ತಿ ಹೇಳಿಕೊಂಡು ಸಕುಟುಂಬನಾಗಿ ಆ ಗಂಗಾನದಿಯಲ್ಲಿ ಮುಳುಗಿದನು. ಎದ್ದು ನೋಡಿದರೆ ಕಲ್ಯಾಣಿಯಾಗಿತ್ತು. ಅಲ್ಲಿದ್ದವರೆಲ್ಲರೂ ಕಲ್ಯಾಣಿಯಿಂದೆದ್ದು ಬರುವ ಈ ನಾಲ್ಕು ಜನಗಳನ್ನೂ ನೋಡಿ ಆಶ್ಚರ್ಯಪಟ್ಟು ಕೇಳಿದ್ದಕ್ಕೆ ಆ ಸುಚರಿತನು ತನ್ನ ವೃತ್ತಾಂತವೆಲ್ಲವನ್ನೂ ಹೇಳಿ "ಇದು ಯಾವ ಸ್ಥಳ? ಯಾವ ತೀರ್ಥ?" ಎಂದು ಕೇಳಲು ಅಲ್ಲಿದ್ದವರು, "ಇದು ಯಾದವಗಿರಿ. ಇದು ಕಲ್ಯಾಣಾತೀರ್ಥ" ಎಂದು ಹೇಳಲು ಆ ಮಹಿಮೆಗೆ ಅತ್ಯಾಶ್ಚರ್ಯಪಟ್ಟು ಅಲ್ಲಿಯೇ ನಿತ್ಯವಾಸಮಾಡಿಕೊಂಡಿದ್ದರು.

ಈ ಯಾದವ ಗಿರಿಯಲ್ಲಿ ಸುಚರಿತನು ವಾಸ ಮಾಡುತ್ತಾ ಇರುವಾಗ ಮೂರನೇ ಗಂಡುಮಗುವು ಬಂದು ಹುಟ್ಟಿತು. ಅದಕ್ಕೆ ನಾರಾಯಣನೆಂದು ಹೆಸರಿಟ್ಟನು. ಏಳೆಂಟು ವರ್ಷಗಳಲ್ಲಿ ದುರ್ಭಿಕ್ಷ ಉಂಟಾಗಿ ದಾರಿದ್ರ್ಯದಿಂದ ಅತ್ಯಂತ ಪೀಡಿತನಾಗಿ ಖೇದಪಡುತ್ತಿರುವಾಗ ಇವನ ಹೆಂಡತಿಯು ಬಲಾತ್ಕಾರ ಮಾಡಿದ್ದರಿಂದ ತನ್ನ ಹೆಂಡತಿಯನ್ನೂ ಮೂರನೇ ಮಗ ನಾರಾಯಣನನ್ನೂ ಇಲ್ಲಿ ಬಿಟ್ಟು ಇಬ್ಬರು ಗಂಡುಮಕ್ಕಳನ್ನೂ ಕರೆದುಕೊಂಡು ದ್ರವಿಡದೇಶದ ಒಬ್ಬ ದೊರೆಯ ಸಮೀಪಕ್ಕೆ ಹೋಗಿ, ಮನಸ್ಸಿಲ್ಲದಿದ್ದರೂ, ನಾಲ್ಕಾರು ತಿಂಗಳು ನಗರವಾಸ ದುಃಖವನ್ನು ಅನುಭವಿಸುತ್ತಾ ಕೊನೆಗೆ ಮಹಾಪ್ರಯತ್ನಗಳನ್ನು ಮಾಡಿ ರಾಜದರ್ಶನದಿಂದ ಸ್ವಲ್ಪವೇ ಧನವನ್ನು ಹೊಂದಿ ಹಿಂತಿರುಗಿ ಬರುತ್ತಾ ಇದ್ದನು.

ಇಷ್ಟರಲ್ಲಿಯೇ ಯಾದವಗಿರಿಯಲ್ಲಿದ್ದ ಇವನ ಮೂರನೇ ಮಗ ನಾರಾಯಣ ಎಂಬ ಹುಡುಗನು ಹಸಿವಿನಿಂದ ಬಾಧಿತನಾಗಿ ತನ್ನ ತಾಯಿಯನ್ನು ಅನ್ನವನ್ನು ಯಾಚಿಸಲು ಅವಳು ಒಂದು ಪಾತ್ರದಲ್ಲಿ ಅನ್ನವನ್ನು ಹಾಕಿಕೊಡಲು ಅದು ಭಗವನ್ನಿವೇದಿತವಾದುದಲ್ಲವೆಂದು ಹೇಳಿ ತಿನ್ನದೆ ಶ್ರೀಮನ್ನಾರಾಯಣಸ್ವಾಮಿಯವರ ಮುಂದಿಟ್ಟು ಅತ್ಯಂತ ಭಕ್ತಿಯಿಂದ "ದೇವರೇ, ಇದನ್ನು ಊಟ ಮಾಡು" ಎಂದು ಪದೇ ಪದೇ ಹೇಳುತ್ತಾ ಹೊರಗೆ ನಿಂತಿದ್ದನು.

ಶ್ರೀಮನ್ನಾರಾಯಣನು ಲಕ್ಷ್ಮೀದೇವಿಯ ಸಂಗಡ ಆ ಪಾತ್ರದಲ್ಲಿದ್ದ ಅನ್ನವೆಲ್ಲವನ್ನೂ ಅಂಗೀಕರಿಸಿದ್ದರಿಂದ ಬರೀ ಪಾತ್ರವನ್ನು ನೋಡಿ ಆ ಹುಡುಗನು ಬಹಳ ಸಂತೋಷದಿಂದ ತಾಯಿಯ ಸಮೀಪಕ್ಕೆ ಹೋಗಿ "ಅಮ್ಮಾ ನೀನು ಕೊಟ್ಟ ಅನ್ನವನ್ನು ದೇವರು ಊಟಮಾಡಿಬಿಟ್ಟರು. ನನಗೆ ಬಹಳ ಹಸಿವು ಅನ್ನವನ್ನು ಕೊಡು" ಎಂದು ಕೇಳಿದನು. ಅದಕ್ಕೆ ಅವಳು "ಅರ್ಚಾರೂಪಿಯಾದ ದೇವರು ಅನ್ನವನ್ನು ತಿನ್ನುವುದೆಂದರೇನು? ಎಲ್ಲೋ ಬೆಕ್ಕು ತಿಂದಿರುವುದು. ಈ ದುರ್ಭಿಕ್ಷದಲ್ಲಿ ಹೀಗೆ ಮಾಡಿದರೆ ಅನ್ನವನ್ನು ಎಲ್ಲಿಂದ ತರುವುದು? ನೀನು ಭಿಕ್ಷೆ ಮಾಡಿ ತಂದು ತಿನ್ನು" ಎಂದು ಹೇಳಿ ಒಂದು ಪಾತ್ರವನ್ನು ಕೈಯಲ್ಲಿ ಕೊಟ್ಟಳು. ಆಗ ಅವನು ಅದನ್ನು ತೆಗೆದುಕೊಂಡು ಅಲ್ಲಿದ್ದ
ಹೋದನು.

ಆಗ ಅವನು ಭಿಕ್ಷೆಗಾಗಿ ಯಾವ ಯಾವ ಮನೆಗೆ ಹೋದನೋ ಆಯಾಯ ಮನೆಗಳಿಗೆ ಹೋಗಿ ಲಕ್ಷ್ಮೀದೇವಿಯು ಒಂದು ಸೌಟಿನಿಂದ ಅನ್ನದ ಭಿಕ್ಷೆಯನ್ನಿತ್ತಳು. ಅದೆಲ್ಲವೂ ಮನೆಗೆ ಹೋಗುವಾಗ ರತ್ನಗಳಾದುವು. ಅದನ್ನು ನೋಡಿ ತಾಯಿಯು ಆಸೆಯಿಂದ ಪುನಃ ಕಳುಹಿಸಿದಳು. ಹೀಗೆ ಏಳಾವರ್ತಿ ಭಿಕ್ಷೆಗೆ ಕಳುಹಿಸಿದಳು. ಲೋಕಮಾತೆಯು ಏಳಾವರ್ತಿಯೂ ರತ್ನ ಭಿಕ್ಷೆಯನ್ನು ಕೊಟ್ಟಳು. ಎಂಟನೇ ಆವರ್ತಿ ಹೋದಾಗ ಅನ್ನದ ಭಿಕ್ಷೆಯೇ ಆಗಿತ್ತು. ಆಗ ಇಬ್ಬರೂ ಅದನ್ನು ಊಟಮಾಡಿ ತೃಪ್ತರಾದರು. ಏಳಾವರ್ತಿ ಬಂದ ರತ್ನ ಭಿಕ್ಷೆಯಿಂದ ತೃಪ್ತಿಯಾಗಲಿಲ್ಲ. ಅದುವರೆಗೂ ನಿಶ್ಚಿಂತರಾಗಿ ಮಲಗುತ್ತಾ ಇದ್ದವರು - ಅದುಮೊದಲು ಸ್ವಲ್ಪವೂ ನಿದ್ರೆಯಿಲ್ಲದೆ ಕಾದುಕೊಂಡಿದ್ದರು.

ಅಷ್ಟರೊಳಗೆ ರಾಜಾಸ್ಥಾನದಿಂದ ಯತ್ಕಿಂಚಿದ್ದ್ರವ್ಯವನ್ನು ಯಾಚನೆ ಮಾಡಿ ಆ ಸುಚರಿತನು ತನ್ನ ಇಬ್ಬರು ಮಕ್ಕಳೊಡನೆ ಮಾರ್ಗದಲ್ಲಿ ಬರುತ್ತಿರುವಾಗ ಕಳ್ಳರು ಇವರನ್ನು ಹೊಡೆದು ಇವರ ಕೈಯಲ್ಲಿದ್ದುದನ್ನೆಲ್ಲಾ ಅಪಹರಿಸಿಕೊಂಡು ಹೋದರು. ಆಗ ಸುಚರಿತನು "ಇಂತಹ ದಿವ್ಯಕ್ಷೇತ್ರದಲ್ಲಿ ಪುರುಷೋತ್ತಮನಿಂದ ಬರುವ ಪರಮಪುರುಷಾರ್ಥವನ್ನು ಬಿಟ್ಟು ನರಾಧಮನಿಂದ ಅನರ್ಥವನ್ನು ಸಂಪಾದಿಸಿಕೊಳ್ಳುವುದಕ್ಕಾಗಿ ನರಕವಾಸವನ್ನು ಮಾಡಿದ ನನ್ನಂತಹ

## ಶ್ರೀ ವೆಂಕಟೇಶ್ವರ ಕೇಂದ್ರ ಗ್ರಂಥಾಲಯ ಸಂಶೋಧನ ಕೇಂದ್ರ -- ತಿರುಪತಿ

# ಒಂದು ವಿನಂತಿ

1993 ರಲ್ಲಿ ತಿ.ತಿ.ದೇ. ಆಡಳಿತ ಮಂಡಳಿಯ ವಜ್ರಮಹೋತ್ಸವ ವರ್ಷದಲ್ಲಿ ಶ್ರೀ ವೆಂಕಟೇಶ್ವರ ಕೇಂದ್ರಗ್ರಂಥಾಲಯ, ಸಂಶೋಧನ ಕೇಂದ್ರವನ್ನು ನೆಲೆಗೊಳಿಸಿ ಅದನ್ನು ಸ್ವಾಮಿ ಭಕ್ತರ ಸೇವೆಯಲ್ಲಿ ಸಮರ್ಪಿಸಲಾಯಿತು. ನಮ್ಮ ಪರಂಪರೆಯ ವಾಸ್ತು ಶಿಲ್ಪದ ಹಾಗೂ, ಆಧುನಿಕ ವಾಸ್ತು ಶಾಸ್ತ್ರದ ಉತ್ತಮಾಂಶಗಳನ್ನು ಒಳಗೊಂಡು ನಿಂತಿರುವ ಶ್ರೀ ವೆಂಕಟೇಶ್ವರ ಕೇಂದ್ರಗ್ರಂಥಾಲಯ ಅಪೂರ್ವ ಪುಸ್ತಕಾಗಾರವಾಗಿ ವೇದೋಪನಿಷತ್ತುಗಳ, ಇತಿಹಾಸ ಪುರಾಣಗಳ, ಶಾಸ್ತ್ರ ಭಗವದ್ಗೀತೆಗಳ ಉಪಾದೇಯವೂ ಭವ್ಯವೂ ಆದ ಸಂದೇಶವನ್ನು ಪ್ರಸಾರಮಾಡುವ ಉದ್ದೇಶ ಹೊಂದಿದೆ.

ಸನಾತನ ಧರ್ಮದ ವೈವಿಧ್ಯಮಯ ಮುಖಗಳ, ಭಾರತೀಯ ಚಿಂತನ ಶೀಲತೆಯ, ತತ್ವ, ಧರ್ಮ, ಸಂಗೀತವೇ ಮೊದಲಾದ ಪರಂಪರಾಗತ ಸಂಪದ್ಭರಿತ ಸಂಸ್ಕೃತಿಯಲ್ಲಿ ಸಂಶೋಧನೆ ನಡೆಸಲು ಅವಕಾಶವನ್ನು ಶ್ರೀ ವೆಂಕಟೇಶ್ವರ ಕೇದ್ರಗ್ರಂಥಾಲಯ ಕಲ್ಪಿಸುವುದು. ಬಾರತೀಯ ಶಾಸ್ತ್ರದ ಬಗ್ಗೆ ಅಪರೂಪವೂ, ಅಮುದ್ರಿತವೂ ಆದ ಅಂಶಗಳನ್ನು ಪ್ರಕಟಿಸುವುದೂ, ಸಂಸ್ಕೃತ ಪಾಠಗಳ ಮೂಲ ಪ್ರತಿಗಳನ್ನೂ ಅವುಗಳ ಸರಳಾನುವಾದಗಳನ್ನೂ ಪ್ರಕಟಿಸುವುದೂ, ನಮ್ಮ ಉದ್ದೇಶವಾಗಿದೆ. ಈ ಪುಸ್ತಕ ಭಂಡಾರವು ಭಾರತೀಯ ಸಂಸ್ಕೃತಿಯ ದೇವಾಲಯವಾಗಿ, ಶಿಕ್ಷಣ, ಸಂಶೋಧನೆಯ ಮಹತ್ ಸಂಸ್ಥೆಯನ್ನಾಗಿ ಮಾಡುವುದೇ ನಮ್ಮ ಪವಿತ್ರತಮ ಕರ್ತವ್ಯವಾಗಿದೆ. ಇಡೀ ಯೋಜನೆ ಸಾಕಷ್ಟು ಸಂಪನ್ಮೂಲವನ್ನು ಅಪೇಕ್ಷಿಸುತ್ತದೆ.

ಹೀಗಾಗಿ, ಸಾರ್ವಜನಿಕರಲ್ಲಿ, ಸ್ವಯಂಸೇವಾ ಸಂಸ್ಥೆಗಳಲ್ಲಿ ಧನದ ರೂಪದಲ್ಲಿ ಆಗಲೀ, ಪುಸ್ತಕ ರೂಪದಲ್ಲಿಯಾಗಲೀ ಉದಾರವಾದ ದೇಣಿಗೆಗಳನ್ನು ನೀಡಬೇಕೆಂದು ಮನವಿ ಮಾಡುತ್ತೇವೆ.

ವ್ಯಕ್ತಿಗಳು ಹಾಗೂ ಸಂಸ್ಥೆಗಳು ತಮ್ಮಲ್ಲಿನ ಅಪರೂಪದ ಪುಸ್ತಕಗಳನ್ನೂ ಗ್ರಂಥಾಲಯಕ್ಕೆ ನೀಡಬಹುದು.

ತಮ್ಮ ಎಲ್ಲ ದೇಣಿಗೆಗಳನ್ನು ಪುಸ್ತಕವಾಗಲೀ, ಹಣವಾಗಲೀ ಕಳುಹಿಸಬೇಕಾದ ವಿಳಾಸ -- ವಿಶೇಷಾಧಿಕಾರಿ, ಶ್ರೀ ವೆಂಕಟೇಶ್ವರ ಕೇಂದ್ರಗ್ರಂಥಾಲಯ ಹಾಗೂ ಸಂಶೋಧನ ಕೇಂದ್ರ -- ತಿರುಪತಿ -- 517 502.

ಪಾತಕಿಗೆ ಈ ಶಿಕ್ಷೆಯು ಸಾಲದು" ಎಂದು ಅಂದು ಕೊಂಡು ಬಂದು ನೋಡಿದಾಗ ಮನೆಯೆಲ್ಲಾ ರತ್ನ ಪೂರ್ಣವಾಗಿದ್ದುದನ್ನು ನೋಡಿ, ತನ್ನ ಮಗನಾದ ನಾರಾಯಣನ ವೃತ್ತಾಂತವನ್ನು ಕೇಳಿ, ನಿರ್ಹೇತುಕನಾದ ಭಗವತ್ಕಟಾಕ್ಷಕ್ಕೆ ಅತ್ಯಾಶ್ಚರ್ಯಪಟ್ಟು ಆ ದ್ರವ್ಯಗಳಿಂದ ಭಗವದ್ಭಾಗವತಾರಾಧನೆಯನ್ನು ವಿಶೇಷವಾಗಿ ನಡೆಸುತ್ತಾ ಇದ್ದನು.

ಹೀಗೆ ನಿತ್ಯವೂ ಅನೇಕ ಜನರ ಸಂತರ್ಪಣೆ ಮಾಡುತ್ತಿರುವ ಈ ಸುಚರಿತನ ಔದಾರ್ಯಾದಿಗಳನ್ನು ಕೇಳಿಯೂ ಬಂದು ನೋಡಿಯೂ ಇರುವ ಕೆಲವು ಕಳ್ಳರು ವೈಷ್ಣವ ವೇಷವನ್ನು ಹಾಕಿಕೊಂಡು ಕಲ್ಯಾಣೀ ತೀರ್ಥದಲ್ಲಿ ನಿತ್ಯಸ್ನಾನ ಮಾಡುತ್ತಾ ದ್ವಾದಶೋರ್ಧ್ವಪುಂಡ್ರ ತುಲಸೀ ನಳಿನಾಕ್ಷಮಾಲಿಕಾದಿ ಧಾರಣ ಮಾಡಿ ಶ್ರೀ ನಾರಾಯಣಸ್ವಾಮಿಯವರನ್ನು ನಿತ್ಯಸೇವೆ ಮಾಡುತ್ತಾ ಸುಚರಿತನ ಮನೆಯಲ್ಲಿ ಶ್ರೀಪಾದತೀರ್ಥ ಪ್ರಸಾದಗಳನ್ನು ಸ್ವೀಕಾರ ಮಾಡುತ್ತಾ ಕದಿಯುವುದಕ್ಕೆ ಸಮಯ ನಿರೀಕ್ಷಣೆ ಮಾಡುವವಪ್ಪರೊಳಗಾಗಿ ಇವರು ಮಾಡಿದ ಈ ಸತ್ಕಾರ್ಯಗಳಿಂದಲೂ ಆ ಸುಚರಿತನ ಸಹವಾಸದಿಂದಲೂ, ಅವರ ಮನಸ್ಸು ಶುದ್ಧ ಸತ್ವಗುಣಮಯವಾಗಿ ಪಶ್ಚಾತ್ತಾಪ ಹುಟ್ಟಿ, ಸುಚರಿತನ ಪಾದಗಳಿಗೆ ರಗಿ "ನಿಮ್ಮ ಧನವನ್ನು ಅಪಹರಿಸುವುದಕ್ಕಾಗಿ ಬಂದ ಮಹಾಪಾಪಿಗಳಾದ ನಮಗೆ ತಕ್ಕ ಪ್ರಾಯಶ್ಚಿತ್ತವನ್ನು ಅಪ್ಪಣೆಕೊಡಿಸಿ ಕಾಪಾಡಬೇಕು" ಎಂದು ಪ್ರಾರ್ಥಿಸಿದಾಗ ಆ ಸುಚರಿತನು "ಧನಂ ಮದೀಯಂ ತವ ಪಾದಪಂಕಜಂ" ಎಂಬಂತೆ ನಾರಾಯಣ ಪಾದಾರವಿಂದ ರೂಪವಾದ ನನ್ನ ಧನವು ಯಾರಿಗೂ ಕದಿಯಲು ಸಾಧ್ಯವಿಲ್ಲ" ಎಂದು ಮೊದಲಾಗಿ ಜ್ಞಾನೋಪದೇಶ ಮಾಡಿ ಅವರಿಗೆಲ್ಲಾ ಮೋಕ್ಷೈಶ್ವರ್ಯವನ್ನು ಕೊಡಿಸಿದನು. ಹೀಗೆ ಕಳ್ಳರಿಗೇ ಮೋಕ್ಷ ಬಂದಾಗ ಆ ಸುಚರಿತನಿಗೆ ಮೋಕ್ಷ ಬಂತೆಂಬ ವಿಚಾರವನ್ನು ಹೇಳಬೇಕಾದುದೇ ಇಲ್ಲ.

(ಸಶೇಷ)



# ಅನ್ನಮಾಚಾರ್ಯ

---ಗುರುಮೂರ್ತಿ ಪೆಂಡಕೂರು.

ತಾಳ್ಳಪಾಕ ಆಂಧ್ರಪ್ರದೇಶದ ರಾಯಲಸೀಮೆಯ ಕಡಪ ಜಿಲ್ಲೆಯ ಒಂದು ಹಳ್ಳಿ. ೧೫-೧೬ ನೇ ಶತಮಾನದಲ್ಲಿ ಈ ಹಳ್ಳಿಯ ಒಂದು ಕುಟುಂಬದವರು ಶ್ರೀ ವೈಷ್ಣವ ಧರ್ಮ ಪ್ರಸಾರಕ್ಕಾಗಿ ವಿಶೇಷವಾಗಿ ಶ್ರಮಿಸಿದರು. ಈ ಕುಟುಂಬದ ವಿದ್ವಾಂಸರು, ಕೃತಿ ರಚನಕಾರರು, ತುಂಬಾ ಪ್ರಸಿದ್ಧರಾಗಿದ್ದಾರೆ. ಇವರಲ್ಲಿ ಹಿರಿಯರಾದ ಅನ್ನಮಾಚಾರ್ಯರಿಗೆ ವೆಂಕಟೇಶನ ಸಾಕ್ಷಾತ್ಕಾರವಾಗಿತ್ತೆಂದು ಪ್ರತೀತಿ. ಅನ್ನಮಾಚಾರ್ಯರು ಮೂವತ್ತೆರಡು ಸಾವಿರ ಕೀರ್ತನೆಗಳನ್ನೂ ಪದಗಳನ್ನೂ ರಚಿಸಿದ್ದಾರೆ. ಈ ಪೈಕಿ ಅವರ ಮಗ್ಗ ಪೆದ್ದ ತಿರುಮಲಾಚಾರ್ಯರು ತಾಮ್ರದ ತಗಡಿನ ಮೇಲೆ ಬರೆಸಿ ಉಳಿಸಿದ ಹದಿನಾಲ್ಕು ಸಾವಿರ ಕೀರ್ತನೆಗಳು ಈಗ ಲಭ್ಯ. ತಿರುಮಲೆಯ ಶ್ರೀ ವೆಂಕಟೇಶನ ಆಲಯದಲ್ಲಿ ಭದ್ರವಾಗಿ ರಕ್ಷಿಸಲ್ಪಟ್ಟ ಈ ಕೃತಿಗಳು ಈ ಶತಮಾನದ ಮೂರನೆಯ ದಶಕದಲ್ಲಿ ದೊರೆತವು.

ನಾರಾಯಣಸೂರಿ ಮತ್ತು ಲಕ್ಕಮಾಂಬ ಅವರಿಗೆ ವೆಂಕಟೇಶನ ವರಪ್ರಸಾದವಾಗಿ ೧೪೨೪ ರಲ್ಲಿ ಅನ್ನಮಾಚಾರ್ಯರು ಜನಿಸಿದರು. ಚಿಕ್ಕಂದಿನಿಂದಲೂ ವೆಂಕಟೇಶನ ಕುರಿತು ಭಕ್ತಿ ಭಾವದಿಂದ ಹಾಡುತ್ತಾ, ಹಾಡುಗಳನ್ನು ರಚಿಸುತ್ತಾ, ಕುಣಿಯುತ್ತಾ ಅನ್ನಮಾಚಾರ್ಯರು ಬೆಳೆದರು. ಲೋಕದ ಜಂಜಾಟದಿಂದ ಬೇಸತ್ತು ಅನ್ನಮ ತಿರುಪತಿಗೆ ಹೊರಟರು. ಬೆಟ್ಟವನ್ನು ಹತ್ತುತ್ತ ಮಾರ್ಗ ಮಧ್ಯದಲ್ಲಿ ಮಲಗಿದ ಅವರ ಕನಸಿನಲ್ಲಿ ತಾಯಿ ಅಲಮೇಲು ಮಂಗಮ್ಮನ ಆಶೀರ್ವಾದ ವಾಯಿತು. ಬೆಟ್ಟವನ್ನೇರಿದ ಅನ್ನಮ ವೆಂಕಟೇಶನ ಪ್ರಥಮ ದರ್ಶನದಿಂದ ಪುಲಕಿತರಾಗಿ ಹಾಡಿದ ರೋಮಾಂಚನವನ್ನು ಅವರ ಕೀರ್ತನೆಗಳಲ್ಲಿಯೇ ಕಾಣಬೇಕು.

ಅನ್ನಮರು ರಚಿಸಿದ ಶತಕಗಳನ್ನು ಕೇಳಿ ವೆಂಕಟೇಶನ ಮುಚ್ಚಿದ ಬಾಗಿಲುಗಳು ತೆರೆದವು. ಅನಂತರ ಅಹೋಬಿಲದ ಸ್ವಾಮಿಗಳ ಶಿಷ್ಯರಾದರು. ತಿರುಮಲಮ್ಮ ಅಕ್ಕಲಮ್ಮ ಅವರನ್ನು ಮದುವೆಯಾದರು. ಶಾಸ್ತ್ರಗಳ ಅಧ್ಯಯನ ಮಾಡುತ್ತಾ ತಿರುಪತಿ ದೇವರ ಭಕ್ತಿಯಲ್ಲಿ ಲೀನವಾದರು. ಅನ್ನಮಯ್ಯನ ಸಕಲ ಪಾಂಡಿತ್ಯವೂ ಚೇತನವೂ ವೆಂಕಟೇಶನಿಗೆ ಮುಡಿಪಾದವು.

ವಿಜಯನಗರದ ಅರಸನಾದ ಸಾಳುವ ನರಸಿಂಹರಾಯರು ಅನ್ನಮಯ್ಯನ ಅಭಿಮಾನಿ ಮತ್ತು ಪೋಷಕರಾದರು. ಆದರೆ ದೇವರನ್ನು ಬಿಟ್ಟು ಮನುಷ್ಯರನ್ನೂ, ರಾಜರನ್ನೂ ಸ್ತುತಿಸಲು ನಿರಾಕರಿಸಿದ ಅನ್ನಮಯ್ಯ ರಾಜಾಸ್ಥಾನದಿಂದ ದೂರವಾದರು. ಅನಂತರ ಅವರ ಬದುಕೆಲ್ಲಾ ತಾಳ್ಳಪಾಕ ಮತ್ತು ತಿರುಪತಿಯಲ್ಲೇ ಕಳೆಯಿತು. ದಾಸವರೇಣ್ಯರಾದ ಪುರಂದರದಾಸರು ಮತ್ತು ಅನ್ನಮಾಚಾರ್ಯರ ಭೇಟಿಯನ್ನು ಚೆನ್ನಣ್ಣ ಕವಿಯು ರಸವತ್ತಾಗಿ ವರ್ಣಿಸಿದ್ದಾರೆ. ತುಂಬು ಜೀವನ ನಡೆಸಿದ ಅನ್ನಮಾಚಾರ್ಯರು೧೫೦೩ ರಲ್ಲಿ ವೈಕುಂಠವಾಸಿಗಳಾದರು.

ಅವರ ಗೀತೆಗಳಲ್ಲದೇ, ಅವರು ರಚಿಸಿದ ಅಲಮೇಲು ಮಂಗಮ್ಮನ ಶತಕವೂ, ಶೃಂಗಾರ ಮಂಜರಿಯೆಂಬ ಭಕ್ತಿ ಕಾವ್ಯವೂ ಈಗ ದೊರೆತಿವೆ. ಅವರ



ಗೀತೆಗಳೋ ವೆಂಕಟೇಶನಿಗೆ ಅರ್ಪಿಸಿದ ಪೂಜಾ ಪುಷ್ಪಗಳು. ಈ ಸಂಕೀರ್ತನೆಗಳು ವೆಂಕಟೇಶನನ್ನು ಕಾಡುವ, ಬೇಡುವ, ಆಶೀರ್ವಾದ ಪಡೆವ ಬಿನ್ನಹಗಳಾಗಿವೆ. ಕೆಲವು ಅಧ್ಯಾತ್ಮ ಸಂಕೀರ್ತನೆಗಳಾದರೆ, ಕೆಲವು ಶೃಂಗಾರ ಸಂಕೀರ್ತನೆಗಳು.

ಆಧ್ಯಾತ್ಮ ಕೀರ್ತನೆಗಳು ಭಕ್ತಿಯನ್ನೂ ವಿರಕ್ತಿಯನ್ನೂ ಪ್ರತಿಪಾದಿಸುತ್ತವೆ. ಭಕ್ತಿ ಕೊಲದಿ ವಾಡೇ ಪರಮಾತ್ಮುಡು ಎಂಬ ಅವರ ಪಲ್ಲವಿಯೇ ಅವರ ಗೀತೆಗಳ ಸಂದೇಶವನ್ನು ಸಾರುತ್ತವೆ. ಅನ್ನಮಾಚಾರ್ಯರಿಗೆ ಭಗವಂತನೆಂದರೆ ಸವೆಯದ ನಿಧಿ, ಮುಕ್ತ ಬೆಳಕಿನ ಹಗಲು. ಪರಮಾತ್ಮನು ಆಗತಾನೇ ಕಡೆದ ನವನೀತ. ಪರಮಸುಂದರ ಪರಿಪೂರ್ಣನಾದ ದೇವನಿಗೆ ಬಣ್ಣಗಳೇಕೆ? ಅಲಂಕಾರಗಳೇಕೆ ? ಅವನು ಎಲ್ಲರ ದೊರೆ ಮತ್ತು ಪರಮ ದಯಾನಿಧಿ. ಆದರೂ ಅನ್ನಮ ಲೋಕಜೀವನದಲ್ಲಿ ಬಳಲಿ ದ್ವಂದ್ವದಲ್ಲಿ ತೊಳಲಿದ್ದನ್ನು ಕಾಣಬಹುದು. ಅವರ ಕೆಲವೊಂದು ಗೀತೆಗಳಲ್ಲಿ ಬದುಕಿನ ನಿರರ್ಥಕತೆಯ ಬಗ್ಗೆ ಮತ್ತು ದೊಳಲಾಟದ ಬಗ್ಗೆ ಹೊಯ್ದಾಡುವುದನ್ನು ಕಾಣಬಹುದು.

ದೇವಸ್ಥಾನದಲ್ಲಿ ವರ್ಷಾವಧಿ ನಡೆವ ಉತ್ಸವಗಳು ಅನ್ನಮಾಚಾರ್ಯರ ಕೃತಿರಚನೆಗೆ ಸ್ಫೂರ್ತಿ ನೀಡಿವೆ. ಎಲ್ಲ ಉತ್ಸವಗಳಲ್ಲಿ ದೈವೀಲೀಲೆಯನ್ನೂ ವಿಶ್ವದ ವೈಭವವನ್ನೂ ಅವರು ಕಾಣುತ್ತಾರೆ. ಶೃಂಗಾರ ಸಂಕೀರ್ತನೆಗಳಲ್ಲಿ ದೇವಪತಿ ಭಕ್ತಸತಿ - ಭಾವದಿಂದ ಅವರು ತನ್ಮಯರಾಗುತ್ತಾರೆ. ನಾಯಕಿಯು ನಾಯಕನೊಂದಿಗೆ ಸಮಾಗಮವಾಗಲು ತೋರುವ ಉತ್ಕಟತೆಯನ್ನು ಅವರು ಕಾಮಯಾಗವೆಂದು ಕರೆಯುತ್ತಾರೆ.

ಪರಮಾತ್ಮನು ಸಾನ್ನಿಧ್ಯಕ್ಕಾಗಿ ಉತ್ಕಂಠಿತರಾದ ಅವರು ಶೃಂಗಾರ ಕೀರ್ತನೆಗಳಲ್ಲಿ ಅದ್ಭುತ ನಾಟಕೀಯ ಸನ್ನಿವೇಶಗಳನ್ನು ನಿರ್ಮಿಸುತ್ತಾರೆ. ಪ್ರೇಮದ ಅನಂತ ಭಂಡಾರವನ್ನು ಕೋಮಲ ಪದಗಳಲ್ಲಿ ಅಪೂರ್ವ ನಯಗಾರಿಕೆಯಿಂದ ಸೂರೆಗೊಳ್ಳುತ್ತಾರೆ.

ಕೆಲ ಹಾಡುಗಳು ವೆಂಕಟೇಶನ ಪ್ರೀತಿಗಾಗಿ ಅಲಮೇಲು ಮಂಗಮ್ಮನ ಹಂಬಲವನ್ನು ನೋಡುತ್ತೇವೆ. ಅವರ "ಅಲರುಲು ಗುರಿಯಗ" ಕೀರ್ತನೆಯಂತೂ ಶ್ರೀನಿವಾಸನನ್ನು ಮೆಚ್ಚಿಸಲು ಮಾಡಿದ

ಅಲಮೇಲು ಮಂಗಮ್ಮನ ಕುಶಲ ನರ್ತನವನ್ನು ಪದಗಳಲ್ಲಿ ಸೃಷ್ಟಿಸುತ್ತದೆ. ಪ್ರೇಮದ ಅನಂತ ಕಲಾ ಚಾತುರ್ಯದ ಮೂಲಕ ಆ ಪಲುಕುತೇನೆಲತಲ್ಲಿ (ಜೇನುಮಾತಿನ ತಾಯಿ) ಪರಮಾತ್ಮನನ್ನು ಒಲಿಸಿಕೊಂಡು ತನ್ನವನನ್ನಾಗಿ ಮಾಡಿಕೊಂಡದನ್ನು ಅವರ ಕೀರ್ತನೆಗಳು ತೃಪ್ತಿಯಿಂದ ಬಣ್ಣಿಸುತ್ತವೆ. ಅವರು ಕೀರ್ತನೆಗಳಲ್ಲಿ ಅಲಮೇಲು ಮಂಗಮ್ಮ ದೇವರನೊಲಿಸಿಕೊಳ್ಳುವ ಪರಿಪೂರ್ಣ ಭಕ್ತಿಯಾಗಿ ಕಾಣಿಸಿದರೆ, ಶ್ರೀ ವೆಂಕಟೇಶನು ಎಲ್ಲರ ಪ್ರೀತಿಗೆ ಅರ್ಹನಾದ ಪುರುಷೋತ್ತಮನಾಗಿ ಕಂಗೊಳಿಸುತ್ತಾನೆ. ಮಧುರ ಭಕ್ತಿಯ ಮೇರೆಗಳನ್ನು ಮೀರಿ ಅನ್ನಮಯ್ಯ ಅಧ್ಯಾತ್ಮದ ಸಾರ್ಥಕತೆ ಕಾಣುತ್ತಾರೆ.

ಅವರ ಕೀರ್ತನೆಗಳಲ್ಲಿ ಪುರಾಣದ ಪ್ರಸಂಗಗಳು ಯಥೇಚ್ಚವಾಗಿ ಬರುತ್ತದೆ. ತೆಲುಗು ಜಾನಪದ ಭಾಷೆಯನ್ನು ಉಪಮೆಗಳನ್ನು, ನಾಡುನುಡಿಗಳನ್ನು ನಂಬಿಕೆಗಳನ್ನು ಅವರು ಅತ್ಯಂತ ಸುಂದರವಾಗಿ ಬಳಸುತ್ತಾರೆ.

ಅನ್ನಮಾಚಾರ್ಯರ ಮೊಮ್ಮಗನಾದ ಚಿನ್ನತಿರುಮಲಾಚಾರ್ಯರು ತಮ್ಮ ಸಂಕೀರ್ತನ ಲಕ್ಷಣ ಪುಸ್ತಕದಲ್ಲಿ ಅನ್ನಮಾಚಾರ್ಯರನ್ನು ಪದವಿಕವಿತಾ ಪಿತಾಮಹ ಪದಕವಿತಾ ಮಾರ್ಗದರ್ಶಿ ಎಂದು ಕರೆದಿದ್ದಾನೆ. ಆದರೆ ಅನ್ನಮಾಚಾರ್ಯರಿಗಿಂತ ಮೊದಲು ಕನ್ನಡದಲ್ಲಿ ಶ್ರೀ ಪಾದಾರಾಯಸ್ವಾಮಿಗಳಾದಿಯಾಗಿ ಅನೇಕರು ಪದರಚನೆ ಮಾಡಿದ್ದರು. ಆದರೆ ತೆಲುಗಿನಲ್ಲಿ ಅನ್ನಮಾಚಾರ್ಯರೇ ಅದ್ಯ ಪದರಚನಾಕಾರರು. ಅವರ ನಂತರದ ಪ್ರಸಿದ್ಧ ಕವಿಯೆಂದರೆ ಕ್ಷೇತ್ರಜ್ಞರು. ಅನ್ನಮಯ್ಯ ಹಾಡಿದರೆ ನಾರದರನ್ನು, ತುಂಬುರರನ್ನು ನೆನಪಿಗೆ ತರುತ್ತಿದ್ದರಂತೆ. ದಕ್ಷಿಣ ಭಾರತದಲ್ಲಿ ಭಜನ ಸಂಪ್ರದಾಯದಲ್ಲಿ ಅವರ ಹಾಡುಗಳನ್ನು ಕಾಪಾಡಿಕೊಳ್ಳಲಾಗಿದೆ. ತಿರುಪತಿ ದೇವಸ್ಥಾನದಲ್ಲಿ ಕೂಡಾ ಭಜನೆ ಸಂಪ್ರದಾಯದಂತೆ ಅವರ ಹಾಡುಗಳನ್ನು ಹೇಳಲಾಗುತ್ತಿತ್ತು. ಅನಂತರ ದೊರೆತ ತಾಮ್ರಪತ್ರಗಳಲ್ಲಿ ಪ್ರತಿಯೊಂದು ಕೀರ್ತನೆಗೆ ರಾಗಗಳನ್ನು ನಮೂದಿಸಲಾಗಿದೆಯೇ ಹೊರತು ಸಂಗೀತ ಸಂಪ್ರದಾಯಗಳನ್ನು ಗುರುತು ಹಾಕಿಲ್ಲ. ದಾಸರ ಪದಗಳು, ಅನ್ನಮಾಚಾರ್ಯರ ಕೃತಿಗಳು ಸಮಾನ ಧ್ವನಿಯ ಒಂದೇ ಸಂದೇಶದ ರಚನೆಗಳಾಗಿವೆ. ತ್ಯಾಗರಾಜಾದಿಗಳ ಕೀರ್ತನೆಗಳು ಪ್ರಮುಖವಾಗಿ ಸಂಗೀತದ ರಚನೆಗಳಾಗಿವೆ. ಆದರೆ ಅನ್ನಮಾಚಾರ್ಯರ ಪದಗಳು ಭಕ್ತಿ ಕುಸುಮಗಳಾಗಿವೆ. ಆದ್ದರಿಂದ ಗಾಯಕರು ಗೀತೆಯ ಅರ್ಥದ ಕಡೆಗೇ ಗಮನ ನೀಡಬೇಕಾಗುತ್ತದೆ.

ಅನ್ನಮಾಚಾರ್ಯರು ಸುಳಾದಿಗಳನ್ನೂ ರಚಿಸಿದ್ದಾರೆ. ಆದರೆ ನಮಗಿಂದು ದೊರಕಿರುವುದು ರಾಗಮಾಲಿಕೆಯಲ್ಲಿರುವ ಒಂದೇ ಒಂದು ಸುಳಾದಿ. ಅನ್ನಮಾಚಾರ್ಯರು ತಮ್ಮ ಕೀರ್ತನೆಗಳಿಗೆ ಸುಮಾರು ಒಂದುನೂರು ರಾಗಗಳನ್ನು ಪ್ರಯೋಗಿಸಿದ್ದಾರೆ. ಕರ್ನಾಟಕ ಸಂಗೀತ ಪರಂಪರೆಯಲ್ಲಿ ಅನ್ನಮಾಚಾರ್ಯರ ಹೆಸರು ಮಹಾ ಪದಕರ್ತರೆಂದು ಚಿರಸ್ಥಾಯಿಯಾಗಿದೆ. ಅವರು ಕವಿಯಾಗಿ, ಸಂಗೀತ ಕೃತಿರಚನಾ ಕಾರರಾಗಿಯೂ ಆಂಧ್ರ ಸಾಂಸ್ಕೃತಿಕ ಪರಂಪರೆಯಲ್ಲಿ ವಿರಾಜಮಾನರಾಗಿದ್ದಾರೆ.

* * *

### ತಿರುಮಲೆ ತಿರುಪತಿ ದೇವಸ್ಥಾನಗಳು ತಿರುಪತಿ

## ಶ್ರೀ ವೆಂಕಟೇಶ್ವರ ನಿತ್ಯ ಅನ್ನದಾನ ಯೋಜನೆ

**ಎಸ್. ರಮೇಶ್‌ಕುಮಾರ್,** ಐ.ಎ.ಎಸ್.,
ಕಾರ್ಯನಿರ್ವಹಣಾಧಿಕಾರಿ.

ಪ್ರಿಯ ಭಕ್ತ ಬಂಧುಗಳೆ;

ಅನ್ನದಾನಕ್ಕಿಂತ ಇನ್ನು ಚೆನ್ನಾದ ಉನ್ನತವಾದ ದಾನ ಮತ್ತೊಂದಿಲ್ಲ. ಹಸಿದು ಬಂದವರಿಗಶನವೀಯುವುದು ನಮ್ಮ ದೇಶದಲ್ಲಿ ಒಂದು ಸೇವೆ ಮಾತ್ರವೇ ಅಲ್ಲ; ವೇದ ಕಾಲದಿಂದ ಆಚರಣೆಯಲ್ಲಿರುವ ಪರಂಪರಾಗತ ಧರ್ಮವೂ ಆಗಿದೆ. ಆಹಾರವನ್ನು ನೀಡುವವರು ದೇವತೆಗಳೊಡನೆ ಸ್ಥಾನ ಪಡೆಯುವರೆಂದು ಹೇಳಲಾಗಿದೆ.

ತಿರುಮಲೆ ಯಾತ್ರಿಕಗರಿಗೆ ಉಚಿತವಾಗಿ ಹಾಗೂ ಪೂರ್ಣವಾಗಿ ಭೋಜನ ನೀಡುವ ಉದ್ದೇಶದಿಂದ 1985 ರಲ್ಲಿ ತಿರುಮಲೆ ತಿರುಪತಿ ದೇವಸ್ಥಾನಗಳಿಂದ ಆರಂಭಿಸಲ್ಪಟ್ಟ ಶ್ರೀ ವೆಂಕಟೇಶ್ವರ ನಿತ್ಯ ಅನ್ನದಾನಯೋಜನೆಯು ಶೋಭಾಕರವಾದ ಯಶಸ್ಸು ಪಡೆದಿದೆ. ಭಾರತಾದ್ಯಂತದ ದಾನಿಗಳಿಂದ ಈ ಯೋಜನೆಯ ಬಗ್ಗೆ ಅತ್ಯುತ್ಸಾಹ ಕಂಡು ಬರುತ್ತಿದೆ.

ಭೋಜನದ ಗುಣಮಟ್ಟವೂ, ಉತ್ಕೃಷ್ಟತೆಯೂ, ಸಾರ್ವಜನಿಕರ ಶ್ಲಾಘನೆಗೆ ಪಾತ್ರವಾಗಿದೆ. ಈ ವಿಶಿಷ್ಟವಾದ ಅನ್ನದಾನಯೋಜನೆಯ ಸಂತಸಕರ ಫಲವನ್ನು ತಿರುಮಲೆಯ ಬಹುತೇಕ ಯಾತ್ರಿಕರು ಹೊಂದುತ್ತಿದ್ದಾರೆ.

ನಿತ್ಯ ಅನ್ನದಾನಯೋಜನೆಯಲ್ಲಿ, ಶ್ರೀ ಸಾಮಾನ್ಯ ಭಕ್ತರೂ ತಮ್ಮ ಯಥಾಶಕ್ತಿ ವಂತಿಗೆಯನ್ನು ಸಲ್ಲಿಸುವುದರ ಮೂಲಕ, ಪಾಲುಗೊಳ್ಳುವಂತೆ ಮಾಡಬೇಕೆಂದು ಯೋಚಿಸಿ, ಈ ವಂತಿಗೆಯ ಮೊತ್ತವನ್ನು ಸಾಕಷ್ಟು ಕಡಿಮೆ ಮಾಡಲು ತಿ. ತಿ. ದೇವಸ್ಥಾನಗಳು ಈಚೆಗೆ ನಿರ್ಧರಿಸಿದೆ. ತಾವು ರೂ. 1000/- ಅಥವಾ ಗುಣಕಗಳಲ್ಲಿ ದಾನ ಮಾಡಿದರೂ ಸಾಕು; ಉನ್ನತ ಹಾಗೂ ಅರ್ಹವಾದ ಕಾರ್ಯದಲ್ಲಿ ನೆರವು ನೀಡಿದಂತಾಗಿ ಆ ಮೂಲಕ ಕಾಲಾತೀತ ಪರಂಪರೆಯಾದ ಅನ್ನದಾನಯೋಜನೆಯನ್ನು ತಿ.ತಿ.ದೇ. ಉಳಿಸಿಕೊಂಡು ಮುಂದುವರೆಯುವಂತೆ ಮಾಡಿದವರಾಗುತ್ತೀರಿ.

ದೂರದೂರುಗಳಿಂದ ತಿರುಮಲೆಗೆ ಆಗಮಿಸುವ ಯಾತ್ರಿಕರ ಬಗ್ಗೆ ತಮ್ಮ ಹೃದಯ ಸಹಾನುಭೂತಿಯಿಂದ ಆರ್ದ್ರವಾಗುವಲ್ಲಿ, ಪರಿಷ್ಕೃತವಾದ ನಿತ್ಯ ಅನ್ನದಾನಯೋಜನೆಯಲ್ಲಿ ಸೇರಿ, ಈ ಪವಿತ್ರ ಸೇವೆಯಲ್ಲಿ ಭಾಗಿಗಳಾಗಿರಿ.

ಅನ್ನೇಶ್ರಿತಾನಿ ಭೂತಾನಿ ಅನ್ನಂ ಪ್ರಾಣಮಿತಿ ಶ್ರುತಿಃ
ತಸ್ಮಾದನ್ನಂ ಪ್ರದಾತವ್ಯಂ ಅನ್ನಂ ಹಿ ಪರಮಂ ಹವಿಃ
--ಬೋಧಾಯನ ಧರ್ಮಸೂತ್ರ.

ಒಳಶಕ್ತಿಯ ಜೀವಸತ್ವ ಆಹಾರ ಎಂದು ವೇದಗಳು ಘೋಷಿಸುತ್ತಿವೆ. ಅನ್ನದಾನ, ಭೌತಿಕ ಗುಣಗಳನ್ನು ಮೀರಿ ನಿಲ್ಲುವ ಅಮೂಲ್ಯ ಕ್ರಮವಾಗಿದೆ. ಹಾಗಾಗಿ ಅನ್ನದಾನ ಮಾಡಬೇಕು.

ವಂದನೆಗಳೊಡನೆ ತಮ್ಮ ವಿಶ್ವಾಸಿ,
**ಎಸ್. ರಮೇಶ್‌ಕುಮಾರ್**

# ಶ್ರೀ ಯತಿರಾಜ ವಾದಿರಾಜರ ಪಂಚವೃಂದಾವನ

---ಎಸ್. ಕೆ. ಆಚಾರ್.



ಯತಿಶೇಖರ ಗುರುರಾಜರ ಪಂಚವೃಂದಾವನದ ದರ್ಶನ ಭಾಗ್ಯವೇ ಒಂದು ದೊಡ್ಡ ಪವಾಡ. ಇತರ ಮಾಧ್ವಯತಿಗಳಿಗೆ ಒಂದು ವೃಂದಾವನ ಇದ್ದರೆ ವಾದಿರಾಜರಿಗೆ ಒಂದು ಮೂಲ ವೃಂದಾವನ ಹಾಗೂ ೪ ಉಪ ವೃಂದಾವನಗಳನು ಹೊಂದಿರುವರು. ವಾದಿರಾಜರ ಪ್ರೇರಣೆಯಂತೆ ಅವರ ಪ್ರಶಿಷ್ಯರಾದ ವೇದನಿಧಿ ತೀರ್ಥರು ರಚಿಸಿದ ಅಣು ವೃಂದಾವನಾಖ್ಯಾನವೆಂಬ ಕಿರು ವಾದಿರಾಜ ಸ್ತೋತ್ರವು ವೃಂದಾವನದ ಪಕ್ಕದಲ್ಲಿ ಕಲ್ಲಿನಿಂದ ಕೆತ್ತಲ್ಪಟ್ಟಿದೆ. ಇದರ ಪಠನ, ಮನನ ಬಹಳ ಶ್ರೇಯಸ್ಕರ. ಶಾರ್ವರಿ ಸಂವತ್ಸರದ ಮಾಘ ಶುದ್ಧ ದ್ವಾದಶಿಯಂದು (ಕ್ರಿ.ಶ. ೧೪೮೦) ಹೂವಿನ ಕೆರೆಯಲ್ಲಿ ಜನಿಸಿದ ಶ್ರೀ ವಾದಿರಾಜರು ಸಂವತ್ಸರಗಳ ಎರಡು ಪೂರ್ಣ ಋತುಚಕ್ರಗಳನ್ನು ಕಂಡು ಪುನಃ ಅದೇ ಸಂವತ್ಸರದ ಬಹುಳ ತದಿಗೆಯಂದು (ಕ್ರಿ.ಶ. ೧೬೦೦) ಶಿರ್ಶಿಯಿಂದ ೧೯ ಕಿ.ಮೀ. ದೂರದಲ್ಲಿರುವ ಶ್ರೀ ಕ್ಷೇತ್ರ ಸೋದೆಯಲ್ಲಿ ಸಶರೀರ ವೃಂದಾವನ ಪ್ರವೇಶಗೈದರು. ಸಶರೀರ ವೃಂದಾವನ ಪ್ರವೇಶಗೈದ ಮಾಧ್ವಯತಿಗಳಲ್ಲಿ ವಾದಿರಾಜರು ಮೊದಲಿಗರಾಗಿದ್ದಾರೆ, ನಂತರ, ಮಂತ್ರಾಲಯದ ಮುನಿಗಳಾದ ರಾಘವೇಂದ್ರರು ದ್ವಿತೀಯರು. ವಾದಿರಾಜರು ೧೧೨ ವರ್ಷಕ್ಕೂ ಮಿಕ್ಕಿ ಯತಿಯಾಗಿದ್ದರು. ಪ್ರಾಯಶಃ ಇಷ್ಟೊಂದು ದೀರ್ಘಕಾಲದ ಸನ್ಯಾಸ ಜೀವನವನ್ನು ಇನ್ನಾವ ಯತಿಯೂ ಹೊಂದಿಲ್ಲ.

ಉಪವೃಂದಾವನಗಳಲ್ಲಿ ತನ್ನ ಅರ್ಚನೆಗಾಗಿ ಪರಮಾತ್ಮನ ಮತ್ಸ್ಯಕೂರ್ಮ ವರಾಹಾದಿದಶಾವತಾರಿ ರೂಪಗಳನ್ನು ನಿಲ್ಲಿಸಿ, ತಾನು ಪ್ರವೇಶಿಸಿದ ಮೂಲ ವೃಂದಾವನ ದಕ್ಷಿಣ ಭಾಗದಲ್ಲಿ - ಮುಖ್ಯಪ್ರಾಣ ಹಾಗೂ ಶ್ರೀ ರಾಮಚಂದ್ರ, ೨) ಪಶ್ಚಿಮ ಭಾಗದಲ್ಲಿ ಭೀಮಸೇನ ಹಾಗೂ ಶ್ರೀಕೃಷ್ಣ ೩) ಉತ್ತರದಲ್ಲಿ ಮಧ್ವಾಚಾರ್ಯ ಹಾಗೂ ವೇದವ್ಯಾಸ ೪) ಪೂರ್ವಭಾಗದಲ್ಲಿ ವಾದಿರಾಜ ಮತ್ತು ಹಯಗ್ರೀವ ದೇವರನ್ನು ಪ್ರತಿಷ್ಠೆ ಮಾಡಿ ತಾವು ಮಾತ್ರ ಭಾವೀ ಸಮೀರರು ಎಂಬ ವಿಚಾರವನ್ನು ಅವರ ವೃಂದಾವನವೇ ಸೂಚಿಸುತ್ತದೆ. ಮೇಲಾಗಿ ಉಡುಪಿಯಲ್ಲಿ ೪ ಪರ್ಯಾಯಗಳನ್ನು ಮುಗಿಸಿದ ವಾದಿರಾಜರು, ೫ನೆಯ ಪರ್ಯಾಯವನ್ನು ತನ್ನ ಶಿಷ್ಯರಿಗೆ ಉಡುಪಿಯಲ್ಲಿ ನಡೆಸಲು ಆದೇಶಿಸಿ ತಾನು ಮಾತ್ರ ಸೋದಾ ಕ್ಷೇತ್ರದಲ್ಲಿ ಚಿಕ್ಕ ಉಡುಪಿ, ಧವಳ ಗಂಗಾತೀರ್ಥ, ಅದರ ಸುತ್ತಮುತ್ತ ನಿತ್ಯಾರ್ಚನೆಗಾಗಿ ಆಂಜನೇಯ, ಗೋಪಾಲಕೃಷ್ಣ, ಚಂದ್ರೇಶ್ವರ, ತ್ರಿವಿಕ್ರಮ ದೇವರ ಪ್ರತಿಷ್ಠೆ ಮುಂತಾದ ಕಾರ್ಯಗಳನ್ನು ನೆರವೇರಿಸುತ್ತಾರೆ. ಈ ರೀತಿ ವಿಶೇಷ ಹರಿಗುರುಗಳ ಸನ್ನಿಧಾನದಿಂದ ಕೂಡಿದ ಸೋದಾಕ್ಷೇತ್ರವು ಭಕ್ತರ ಕಷ್ಟ ಪರಿಹರಿಸಿ ಸುಯೋಗ್ಯ ಮಾರ್ಗದರ್ಶನ ನೀಡಲು ಪರಮಶಕ್ತಿಶಾಲಿಯಾಗಿದೆ.

ಏಕಾಂತ ಭಕ್ತರೂ, ಭಾವೀ ಸಮೀರರೂ ಆದ ಗುರುರಾಜರು ತಿರುಮಲೆಗೆ ಹೋದಾಗ ಶೇಷಾಚಲವು ಸಾಲಿಗ್ರಾಮ ಶಿಲೆಯಾಗಿ ಕಂಡುಬರಲು ಮೊಣಕಾಲಿನಲ್ಲಿ ಬೆಟ್ಟವನ್ನೇರಿ ತಿರುಮಲೇಶ ಶ್ರೀನಿವಾಸ ಪ್ರಭುವಿನ ದರ್ಶನ ಮಾಡುವರು. ಪ್ರಭು ವೆಂಕಟೇಶನ ಅಲಂಕಾರಕ್ಕಾಗಿ ದೊಡ್ಡ ಸಾಲಿಗ್ರಾಮ ಹಾರವನ್ನು ನೀಡುವರು. ಆಹಾರವನ್ನು ಇಂದಿಗೂ ಶ್ರೀ ವೆಂಕಟೇಶನ ಕೊರಳಲ್ಲಿರುವುದನ್ನು ನಾವು ತಿರುಮಲೆಗೆ ಹೋದಾಗ ನೋಡಬಹುದು. ಮೇಲಾಗಿ ತಮ್ಮ ಸಮಸ್ಯೆಗಳಿಗೆ ಮಂತ್ರಾಲಯದಲ್ಲಿ ಪರಿಹಾರ ಕಾಣದವರು, ಸೋದೆಯಲ್ಲಿ ಅನುಗ್ರಹೀತರಾಗುವುದು, ಅಲ್ಲಾಗದಿದ್ದಲ್ಲಿ ಪಂಢರಾಪುರ, ತಿರುಮಲೆ, ಶ್ರೀರಂಗ, ಉಡುಪಿ ಕ್ಷೇತ್ರಗಳಲ್ಲಿ ಆಸ್ತಿಕರು ಭಯಮುಕ್ತರಾಗುವುದು ಇಂದು ನಡೆಯುತ್ತಿರುವ ಪ್ರತ್ಯಕ್ಷ ಸತ್ಯ. ಭಕ್ತಪರಾಧೀನ ಹಾಗೂ ಕರುಣಾಳುವಾದ ಶ್ರೀನಿವಾಸನು ತನ್ನ ಅಮರ ಭಕ್ತರಾದ ವಾದಿರಾಜರನ್ನು ಮೆರೆಸಲು ಅಲ್ಲಿಗೆ ಬರುವ ಭಕ್ತರ ಅನುಕೂಲಕ್ಕಾಗಿ ಸೋದಾ ಕ್ಷೇತ್ರದಲ್ಲೇ, ಒಂದು ಕೋಟಿ ರೂ. ವೆಚ್ಚದಲ್ಲಿ ಭವ್ಯ ಕಲ್ಯಾಣ ಮಂಟಪ, ವಿಶ್ರಾಂತಿ ಗೃಹ ಕಟ್ಟಿಸಲು ಈಗ ಆರಂಭಿಸಿರುತ್ತಾನೆ.

ಮಾಹಾನ್ ತಪಸ್ವಿಯಾದ ವಾದಿರಾಜ ಗುರುಗಳ ಹಿರಿಮೆಯೆಂದರೆ ಅವರು--

ಕಾಮಧೇನುರ್ಯಥಾರ್ಥಪೂರ್ವಂ
ಸರ್ವಾಭೀಷ್ಟ ಫಲಪ್ರದಾ
ತಥಾ ಕಲೌ ವಾದಿರಾಜ
ಶ್ರೀಪಾದೋಭೀಷ್ಟದಸ್ಸತಾಂ

ಎಂಬ ಶ್ಲೋಕದಲ್ಲಿ ಹೇಳಿರುವಂತೆ ಭಕ್ತರ ಪಾಲಿಗೆ, ಅವರ ಇಷ್ಟಾರ್ಥಗಳನ್ನು ಪೂರೈಸುವ ಕಲಿಯುಗದ ಕಾಮಧೇನುವಾಗಿದ್ದಾರೆ.



ಸರ್ವವಿಧ ಕೈಂಕರ್ಯಕಾರಿಣಃ
"ಯತ್ರರ್ಷಯಃ ಪ್ರಥಮಜಾಃ"
"ತದ್ವಿಷ್ಣೋಃ ಪರಮಂ"
"ತತ್ರ ಧೀರಾಃ"

ಇತ್ಯಾದಿ ಶ್ರುತಿಪ್ರತಿಪನ್ನ ಶೇಷ ಶೇಷಾಶನ ಗರುಡ ಪ್ರಮುಖಾಶ್ಚೇತನ ವಿಶೇಷಾಃ - ಈ ವಿಷಯವನ್ನು ಚಿಕುಪಾಧ್ಯಾಯನು --

"ಪರಮಾತ್ಮನ ಸನ್ನಿಧಿ ಪರಿ
ಕರಂಗಳಾಗಿರ್ಪ ಶೇಷಾ ಶೇಷಾಶನ ಮು
ಖ್ಯರೆನಿಪ್ಪ ನಿತ್ಯ ಸೂರಿಗ
ಳುರುತರ ಶುಭಗುಣ ಗಣಾಂಕರನು
ಪ್ರಚುರಮಳರ್"

ಎಂಬುದಾಗಿ ಬಿನ್ನಪಮಾಡಿದ್ದಾನೆ. ವಿಶಿಷ್ಟಾದ್ವೈತದಲ್ಲಿ ಪರಮಾತ್ಮನು ಚೇತನರಿಗೆ (ಜೀವಾತ್ಮರಿಗೆ) ಪರಮ ಪ್ರಾಪ್ಯನು. ಚೇತನರು ಭಗವಂತನಿಗೆ ಶೇಷಭೂತರು. ಭಗವಂತ ಚೇತನರಿಗೆ ಶೇಷಿ. ವೇದಾಂತದೇಶಿಕರು ತಮ್ಮ ಅರ್ಥಪಂಚಕಾಧಿಕಾರದಲ್ಲಿ ಪರಮಾತ್ಮನು ಚೇತನರಿಗೆ ಪರಮಪ್ರಾಪ್ಯ ಚೇತನರು ಪ್ರಾಪ್ತನಾದ ಆ ಭಗವಂತನ ಸಾಯುಜ್ಯವನ್ನು ಹೊಂದುವುದೇ ಪ್ರಾಪ್ತಿ. ಅಂತಹ ಪ್ರಾಪ್ತಿ ಪಡೆಯಲು ಸಾಧನಗಳೇ ಉಪಾಯಗಳು. ಅದಕ್ಕೆ ಅಡ್ಡಿಯಾಗುವ ಕಾರ್ಯಗಳೇ ಪ್ರಾಪ್ತಿವಿರೋದಿಗಳು. ಈ ಐದು ಜ್ಞಾನಗಳೇ ಅರ್ಥಪಂಚಕ ಜ್ಞಾನವೆಂದು ಬೋಧಿಸುತ್ತಾರೆ.

ನಿತ್ಯರು ವಿಷ್ವಕ್ಸೇನಾದಿ ಜೊತೆಯಲ್ಲಿ ಜಯವಿಜಯಾದಿಗಳೂ ಕೂಡ ನಿತ್ಯರು ಎಂಬುವುದಾಗಿ ಕವಿ ತಿಳಿಸುತ್ತಾನೆ.

ಸ್ಫುರಿಸಿರ್ಪರ್ ತಾಮುಂ ನಿ
ತ್ಯರೆನಿಸಿ ಚಂಡ ಪ್ರಚಂಡ ಕುಮುದರ್
ಕುಮುದಾಕ್ಷ
ರುಚಿರ ಭದ್ರಸುಭದ್ರರ್
ವರಯತಿ ಜಯ ವಿಜಯರೆಂಬ
ಗಣದವರಿವರೊಳ್

ಶಾಸ್ತ್ರಗಳಲ್ಲಿ ತಿಳಿಸಿರುವಂತೆ ಸಂಸಾರ ಬಂಧನದಿಂದ ತಪ್ಪಿಸಿಕೊಳ್ಳಲು ಭಗವದನುಗ್ರಹವನ್ನು ಹೊಂದಲು ಭಕ್ತಿ ಪ್ರಪತ್ತಿಗಳಲ್ಲಿ ತಮ್ಮ ಮನಸ್ಸನ್ನು ನೆಟ್ಟವರಾಗಿ ಭಗವದನುಗ್ರಹವನ್ನು ಹೊಂದಿ ಮೋಕ್ಷವನ್ನು ಹೊಂದುವರೇ ಮುಕ್ತರು. ವೈಕುಂಠಕ್ಕೆ ಹೋಗಿ ಅಲ್ಲಿ ಲಕ್ಷ್ಮೀಪತಿಯ ಸ್ವರೂಪವನ್ನೂ ದಿವ್ಯ ಮಂಗಳವಿಗ್ರಹವನ್ನೂ, ಕಲ್ಯಾಣಗುಣಗಳನ್ನು ವಿಭೂತಿಗಳನ್ನು ಅನುಭವಿಸುತ್ತಾ, ಸ್ತೋತ್ರ ಮಾಡುತ್ತಾ ಪರಮಾತ್ಮನ ಕೈಂಕರ್ಯದಲ್ಲಿ ನಿರತರಾದವರೇ ಮುಕ್ತರು. ಇದನ್ನೇ ಕವಿ ಕನ್ನಡದಲ್ಲಿ--

ಅನಿಶಂ ಶ್ರೀ ರಮಣಾಂಘ್ರಿ
ಪದ್ಮವಿಲಸದ್ಭಕ್ತಿ ಪ್ರಪತ್ಯಾದಿ ಸಾ
ಧನದಿಂದ ತ್ರಿವಿಧಾಘ ಪುಣ್ಯ
ಚಯಮಂ ನೀಗಾಡಿ ತದ್ಧ್ಯಾನದೊಂ
ದನುವಿಂದಂ ಪ್ರಕೃತಿ ಪ್ರಭಾವ
ಜನಿತ ಕ್ಲೇಶಂಗಳಂ ಮಾಣ್ಬುಚೇ
ತನರ ಪ್ರಾಕೃತಮಾದುದಾರ
ಪದಮಂ ಸಾರ್ದಾರ್ ಕರಂ ರಂಜಿಪರ್

ಸಂಸಾರ ಬಂಧನಕ್ಕೆ ಒಳಗಾದವರು, ದೇಹವನ್ನೇ ಆತ್ಮವೆಂದು ಭಾವಿಸುವ ಜನ, ಶಬ್ದ ವಿಷಯಗಳಲ್ಲಿ ಹೆಚ್ಚು ಆಸಕ್ತರಾದವರು, ವರ್ಣಾಶ್ರಮ ಧರ್ಮವನ್ನು ಮೀರಿ ಅಯೋಗ್ಯರನ್ನು ಸೇವೆ ಮಾಡುವವರೂ, ಪರಸ್ತುತಿ ಪರಹಿಂಸೆಯನ್ನು ಮಾಡುವ ಜನರೇ ಬದ್ಧರು. ಇವರು ಭಗವದ್ವಿಮುಖರಾಗಿರ ತಕ್ಕವರು. ಇವರು ಪರರದ್ರವ್ಯವನ್ನು ಅಪಹರಿಸಿ ತಮ್ಮ ಮನೋಭಿಲಾಷೆಗಳನ್ನು ಪೂರೈಸುಕೊಳ್ಳುವವರು. ಈ ವಿಷಯವನ್ನೇ ಕವಿ ಹೇಳುವಾಗ;

# ತಿರುಪತಿಯ ಸ್ಥಳೀಯ ದೇವಾಲಯ ದರ್ಶಿನಿ

ತಿರುಪತಿಗೆ ಬರುವ ಯಾತ್ರಿಕರು ಶ್ರೀವೆಂಕಟೇಶ್ವರಸ್ವಾಮಿಯನ್ನು ಸಂದರ್ಶಿಸಿ ತಿರುಪತಿಯ ಇತರ ದೇವಾಲಯಗಳನ್ನು ಸಂದರ್ಶಿಸಲು ಕಾಲಾವಕಾಶವಿಲ್ಲದೆ ತಮ್ಮ ಸ್ವಸ್ಥಳಗಳಿಗೆ ಹಿಂದಿರುಗುವುದನ್ನು ತಪ್ಪಿಸಲು, ಅವರಿಗೆ ತಿರುಪತಿಯಲ್ಲಿ ಹಾಗೂ ಬಳಿಯಲ್ಲಿ ಇರುವ ಮುಖ್ಯ ದೇವಾಲಯಗಳನ್ನು **ತೋರಿಸಿಕೊಂಡು** ಬರಲು ತಿ. ತಿ. ದೇವಸ್ಥಾನಗಳು ತಿರುಪತಿಯ ಸ್ಥಳೀಯ ದೇವಾಲಯಗಳ ಬಸ್ ಒಂದನ್ನು ಏರ್ಪಡಿಸಿದೆ. ಈ ಬಸ್‌ನಲ್ಲಿ ಹೊರಟು;

***ಶ್ರೀ ಗೋವಿಂದರಾಜಸ್ವಾಮಿ ದೇವಾಲಯ***
***ಶ್ರೀ ಕೋದಂಡರಾಮಸ್ವಾಮಿ ದೇವಾಲಯ***
***ಶ್ರೀ ಪದ್ಮಾವತೀ ಅಮ್ಮನವರ ದೇವಾಲಯ, ತಿರುಚಾನೂರು***
***ಶ್ರೀ ಕಪಿಲೇಶ್ವರಸ್ವಾಮಿ ದೇವಾಲಯ, ಕಪಿಲತೀರ್ಥ***
***ಶ್ರೀ ಕಲ್ಯಾಣ ವೆಂಕಟೇಶ್ವರಸ್ವಾಮಿ ದೇವಾಲಯ, ಶ್ರೀನಿವಾಸ ಮಂಗಾಪುರ***

ದೇವಾಲಯಗಳನ್ನು ದರ್ಶಿಸಿ ತಿರುಪತಿಗೆ ಹಿಂದಿರುಗಬಹುದು. (2 ಗಂಟೆಗಳಲ್ಲಿ)

ಬಸ್ ಹೊರಡುವ ಸ್ಥಳ : ಶ್ರೀ ಗೋವಿಂದರಾಜಸ್ವಾಮಿ ಸತ್ರ (ತಿರುಪತಿ ರೈಲ್ವೇಸ್ಟೇಷನ್ ದಕ್ಷಿಣ)

ಬಸ್ ಹೊರಡುವ ಕಾಲ : ಬೆಳಗ್ಗೆ 6-00, ಬೆಳಗ್ಗೆ 10-00, ಸಂಜೆ 3-00

ಬಸ್ ಪ್ರಯಾಣದ ದರ : ಒಂದು ಟಿಕೆಟ್ಟಿಗೆ ರೂ. 20/- ಮಾತ್ರ. ಕಿರಿಯರಿಗೆ ಅರ್ಧ ಟಿಕೆಟ್;
(ಇದರಲ್ಲಿ ಆಯಾ ದೇವಸ್ಥಾನಗಳ ಪ್ರವೇಶದ ದರವೂ ಸೇರಿದೆ.)

ಯಾತ್ರಿಕರು ಈ ಅವಕಾಶವನ್ನು ಬಳಸಿಕೊಳ್ಳಬೇಕೆಂದು ವಿನಂತಿಸಲಾಗಿದೆ.

***ತಿ. ತಿ. ದೇ.***

ಸತತಂ ಶಬ್ದಾದಿ ವಿಷಯ
ತತಿಯನುಭವ ಜನಿತಮಾದ
ನಿಜದೇಹಮನೋ
ವ್ರತ ಪೊರೆವುದೆ ಪುರುಷಾರ್ಥೋ
ನ್ನತಿ ಯೆಮಗೆಂದಾರ್ ಜಗತ್ತಿನೊಳ್
ವರ್ತಿಸುವರ್
ಪರದಾರ ಪರದ್ರವ್ಯನಿ
ಕರಾಪಹಾರ ಮನೊಡರ್ಚಿ ಸಂಸಾರ ಮನಾರ್
ಪೊರೆವರ್ ಭಗವದ್ವಿಮುಖರ
ವರನೆ ಬುಧರ್ ಬದ್ಧರೆಂದು ಸೊಲ್ಲಿಸುತಿರ್ಪರ್

ಆತ್ಮಾನುಭವ ಮಾತ್ರವನ್ನೇ ಪುರುಷಾರ್ಥವಾಗಿ ಭಾವಿಸಿ ಅದನ್ನು ಪಡೆದವರು. ಸಂಸಾರದಲ್ಲಿ ಸುಖ ಕಾಣದೆ ವ್ಯಥೆಪಡುತ್ತ ಅದನ್ನು ಕಳೆದುಕೊಳ್ಳಲು - ಆತ್ಮಸ್ವರೂಪವು ಜ್ಞಾನಾನಂದಮಯ. ಪ್ರಕೃತಿ ದುಃಖಾಶ್ರಯ, ಆತ್ಮನು ಪ್ರಕೃತಿಗಿಂತ ವಿಲಕ್ಷಣ ನಾಗಿಯೂ ಸ್ವಯಂ ಪ್ರಕಾಶನಾಗಿಯೂ ನಿತ್ಯನಾಗಿ ಇರುವನು --ಎಂಬುದಾಗಿ ತಿಳಿದು ಸ್ವಾತ್ಮಾನಂದವೇ ಪರಮ ಪುರುಷಾರ್ಥ ಎಂದು ಭಾವಿಸಿ ತಮ್ಮ ಯೋಗ ಪ್ರಭಾವದಿಂದ ಕೈವಲ್ಯವನ್ನು ಹೊಂದಿ ಆತ್ಮಾನುಭವಮಾತ್ರವನ್ನೇ ಅನುಭವಿಸುತ್ತಾ ಪರ ಮಾತ್ಮನು ಅನುಭವವನ್ನು ತಿಳಿಯದೆ ಇತ್ತ ಸಂಸಾರ ಸುಖಕಾಣದೆ ಅತ್ತ ಭಗವತ್ ಪ್ರೀತಿ ಸಿಗದೆ ತ್ರಿಶಂಕು ಸ್ವರ್ಗ ಇದ್ದ ಹಾಗೆ, ಕೈವಲ್ಯವು ಪ್ರಕೃತಿ ಮಂಡಲದ ಎಲ್ಲೆಯನ್ನು ದಾಟಿ ವಿರಜಾನದಿಯ ಆಕಡೆಗೂ ವೈಕುಂಠಕ್ಕೂ ನಡುವೆ ಪರಮಾಕಾಶದ ಒಂದು ಭಾಗಮಾತ್ರ. ಕೈವಲ್ಯಸ್ಥಾನಕ್ಕೆ ಸೇರಿದವರಿಗೆ ಪುನರಾ ವೃತ್ತಿಯಿಲ್ಲ; ಆದರೆ ಭಗವದನುಭವವಿಲ್ಲ. ("ಜ್ಞಾನ ಯೋಗ ಮವಲಂಬ್ಯ ಜರಾಮರಣಾ ಯೇ ತ್ಯಾದಿ ರೀತ್ಯಾ ಸಂಸಾರವಿಮುಕ್ತಾಃ ಭಗವತ್ ಪ್ರಾಪ್ತಿವಿ ಹೀನಾಃ ಅಶರೀರಿತ ಯಾಽವಸ್ಥಾಯಾತ್ಮಾನುಭವ ಪರಾಃ ಕತಿಪಯ ಚೇತನಾಃ ಇತಿ ಪ್ರಮಾಣಸಿದ್ಧಂ") ಚಿಕುಪಾಧ್ಯಾಯನು ಕೈವಲ್ಯದ ಬಗ್ಗೆ--

ಘನ ಸಂಸೃತಿ ತಾಪಜ್ವಲ
ನನಿಂದ ಕಡುಬೆಂದು ಬಳಿಕ ಸಂಸಾರದ ದುಃ
ಖನಿವೃತ್ತ್ಯರ್ಥಂ ಶಾಸ್ತ್ರಮ
ನನಿತು ಮನೆಡೆವಿಡದೆ ನೋಡಿ
ಯಭ್ಯಾಸಿಸುವರ್
ಭಗವತ್ ಪ್ರಾಪ್ತಿಯನುಳಿದಾ
ವಗಮುರ್ಬಿಂ ಯಾವದಾತ್ಮಭಾವಿಗಳ ಶರೀ
ರಿ ಗಳಾಗಿ ತಮ್ಮನು ಭವದೆ
ನೆಗಳ್ವಾರ್ ವರ್ತಿಸುವರವರೆ ಕೇವಲರೆನಿಪರ್

ಮುಮುಕ್ಷುಗಳು. ಮೋಕ್ಷವನ್ನು ಅಪೇಕ್ಷಿಸುವ ಭಗವದ್ ಭಕ್ತರು ಇವರಲ್ಲಿ ಉಪಾಸಕರು ಎಂದೂ ಪ್ರಪನ್ನರು ಎಂಬುದಾಗಿ ಎರಡು ವಿಧವಾಗಿರುವರು.

ಉಪಾಸಕರು ಭಗವತ್ ಪ್ರಾಪ್ತಿ ಕಾಮನೆಯುಳ್ಳ ವರಾಗಿ ಸಂಸಾರ ಬಂಧನದಿಂದ ನಿವೃತ್ತರಾಗಲು ಕರ್ಮಜ್ಞಾನ ಭಕ್ತಿ ಯೋಗನಿಷ್ಠರಾಗಿ ಸ್ವಪ್ರಯತ್ನ ದಿಂದ ಮೋಕ್ಷವನ್ನು ಬಯಸುವವರು. ಪ್ರಪನ್ನ ರಾದರೋ ಶರಣಾಗತಿ ನಿಷ್ಠರು. ಸ್ವಪ್ರಯತ್ನವಿಲ್ಲದೆ ತಮ್ಮ ಆಚಾರ್ಯರನ್ನು ಪುರುಷಾಕಾರವಾಗಿ ಭಜಿಸಿ ಶ್ರಿಯಃಪತಿಯಾದ ಶ್ರೀಮನ್ನಾರಾಯಣನ ನಿರ್ಹೇ ತುಕ ಕೃಪೆಯನ್ನೇ ತಮಗೆ ಉಪಾಯವಾಗಿಯೂ ಶ್ರೀ ಲಕ್ಷ್ಮೀಪತಿಯ ಕೈಂಕರ್ಯ ಸೇವೆಯೇ ಪರಮ ಪುರುಷಾರ್ಥವೆಂದು ಅವನನ್ನು ನಂಬಿ ಮೋಕ್ಷವನ್ನು ಅಪೇಕ್ಷಿಸುವವರು ಮುಮುಕ್ಷುಗಳು. ಇವರು ಉಪನಿ ಷತ್ತುಗಳಲ್ಲಿ ತಿಳಿಸಿದ ದಹರಾದಿ ೩೨ ವಿದ್ಯೆಗಳನ್ನು ಬಲ್ಲವರು. ಪ್ರಪನ್ನರಲ್ಲೂ ಆರ್ತ ಪ್ರಪನ್ನರೆಂದೂ (ಶಠಕೋಪಾದಿ ದಿವ್ಯ ಸೂರಯಃ) ದೃಪ್ತ ಪ್ರಪನ್ನ ರೆಂದೂ (ನಾಥ ಯಾಮುನ ಯತಿ ವರಾದಯಃ) ಎರಡು ವಿಧವಾಗಿದ್ದಾರೆ.

ಮುಮುಕ್ಷುಗಳನ್ನು ಕುರಿತು ಚಿಕುಪಾಧ್ಯಾಯನು ಮುಮುಕ್ಷುಗಳೆಂತೆಂದೊಡೆ--

ಉಳಿದರಮನರ್ಥಮುಮನಂ
ತೆಳಸಿಕೆಯು ಮನಚ್ಯುತಾಂಘ್ರಿ ಪದ್ಮಧ್ಯಾನಾ
ಮಳ ಚಿತ್ತರಾಗಿ ಮೋಕ್ಷಮ
ನೆಳಸುವರಾರವರ್ಗಳಂ ಮುಮುಕ್ಷುಗಳೆಂಬರ್
ಅರೆಬರ್ ಪ್ರಪನ್ನ ಸಂಜ್ಞೆಯ
ಪರಮ ಮುಮುಕ್ಷುಗಳೆನಿಪ್ಪರಿಳೆಯೊಳ್
ಮುನ್ನಾಂ
ಪರಿವಟಿಸಿದ ಜೀವಾತ್ಮಾ
ಸ್ವರೂಪ ಮಿಂತ್ಯೆದು ತೆರದೆ ವರ್ತಿಸು ತಿರ್ಕುಂ

ಇನ್ನು ಮುಂದೆ ಕವಿ ಪರಸ್ವರೂಪವನ್ನು ವಿವರಿ ಸುವಾಗ ಅದು ಸರ್ವೇಶ್ವರ ಸ್ವರೂಪ. ಅದು ಪರತ್ವ ವ್ಯೂಹ, ವಿಭವ ಅಂತರ್ಯಾಮಿತ್ವ ಅರ್ಚಾವತಾರ ಎಂದು ಐದು ವಿಧವಾಗಿರುವುದೆಂದು ತಿಳಿಸುತ್ತಾನೆ. ಪರತ್ವವೆಂದರೆ ಅನಾದಿಯಾಗಿ ನಿರವಧಿಕ ತೇಜೋ ಮಯವಾದ ಪರಮ ಪದದಲ್ಲಿ ಬಿಜಯ ಮಾಡಿ ಸಿರುವ ಜ್ಞಾನಾನಂದಮಯನಾದ ಮುಮುಕ್ಷುಗ ಳಿಗೆ ಸದಾ ಅನುಭಾವ್ಯನೂ ಆದ ಪರವಾಸುದೇ ವನು. ಇವನೇ ಮುಕ್ತಪ್ರಾಪ್ಯನು. ಈ ಪರವಾಸು ದೇವನಾದರೋ ಜ್ಞಾನ ಶಕ್ತಿ ಬಲೈಶ್ವರ್ಯ ವೀರ್ಯ ತೇಜೋರೂಪ ಷಾಡ್ಗುಣ್ಯ ಪರಿಪೂರ್ಣನು. ಸಕಲ ಚರಾಚರ ಜೀವರಾಶಿಗಳಿಗೆ ಆಧಾರಭೂತನು. ನಿತ್ಯ ವಿಭೂತಿ ಲೀಲಾ ವಿಭೂತಿಯಿಂದ ಕೂಡಿರುವ ವನು. ಸೃಷ್ಟಿಸ್ಥಿತಿಲಯಕಾರಣನು, ಭವ ಕಮಲ ಜಾತಮುಖ್ಯರಿಗೆ ವಾಕ್ಕು ಮನಸ್ಸುಗಳಿಗೂ ಗೋಚ ರನಾಗದವನು. ಪರಾಕೃತನಾಗಿ ಶ್ರೀ ವೈಕುಂಠದಲ್ಲಿ ವಿರಾಜಿಸುತ್ತಿರುವವನು. ಪರತ್ವಬಗ್ಗೆ ೭ ಪದ್ಯಗಳಲ್ಲಿ ವೈಕುಂಠದ ಬಗ್ಗೆ ವಿವರಣೆ ನೀಡಿ ವ್ಯೂಹವನ್ನು ವರ್ಣಿ ಸುವಾಗ ಸೃಷ್ಟಿ ಸ್ಥಿತಿ ಸಂಹಾರಗಳಿಗೆ ಕರ್ತರಾದ ಪ್ರದ್ಯುಮ್ನ ಅನಿರುದ್ಧ ಸಂಕರ್ಷಣ ಬಗ್ಗೆ ಪ್ರಸ್ತಾಪಮಾ ಡುತ್ತಾನೆ. ವಿಭವ ಸ್ವರೂಪವನ್ನು ರಾಮಕೃಷ್ಣಾದಿ ಅವತಾರಗಳ ವಿಲಕ್ಷಣವನ್ನು ತಿಳಿಸುತ್ತಾನೆ, ದಶಾ ವತಾರ ಜೊತೆಯಲ್ಲಿ ಹಯಗ್ರೀವ ಮೊದಲಾದ ಮಹಿಮೆಗಳುಳ್ಳ ಅವತಾರಗಳೂ ವಿಭವ ಅವತಾರ ಗಳೆಂದು, ಯಾವ ಸಮಯದಲ್ಲಿ ಧರ್ಮಗ್ಲಾನಿ ಆಗು ತ್ತದೋ ಅಂತಹ ಸಮಯಗಳಲ್ಲಿ ಗೋವಿಂದನು ಧರ್ಮವಿರೋಧಿಗಳನ್ನು ಶಿಕ್ಷಿಸಲು ಭೂಲೋಕ ದಲ್ಲಿ ಅವತಾರಮಾಡುತ್ತಾನೆ. ಗೀತೆಯ ಪರಿತ್ರಾ ಣಾಯ ಸಾಧೂನಾಂ ವಿನಾಶಾಯಚ ದುಷ್ಕೃತಾಂ ಧರ್ಮ ಸಂಸ್ಥಾಪನಾರ್ಥಾಯ ಸಂಭವಾಮಿ ಯುಗೇ ಯುಗೇ ಎಂಬುವುದರ (ಭಾವಾರ್ಥ) ವನ್ನೇ ಕವಿ--

"ಸುಜನ ಪರಿತ್ರಾಣಾರ್ಥಂ
ಭಜ ಕೋಪಾಸನ ನಿಮಿತ್ತಮತಿ ದುಷ್ಟಜನ
ವ್ರಜ ನಿರ್ಹರಣಾರ್ಥಂ ಹರಿ
ಸೃಜಿಕುಂ ತನ್ನಂಶಮಂ ಯುಗ
ಪ್ರತಿಯುಗದೊಳ್

ಪರಮಾಣುವಾದ ಜೀವ ಶರೀರವಾಗಿರಲು ತಾನೇ ಆ ಶರೀರಿ ಎನಿಸುತ್ತ ಹಲವಾರು ರೂಪ ಗಳಿಂದ ಚಿತ್ರರೂಪನಾಗಿ ಪ್ರಕಾಶಿಸುತ್ತಾನೆ.

ಇಂತಹ ಕೇಶವಾದಿ ಚತುರ್ವಿಂಶಮೂರ್ತಿಗಳು ಪದ್ಮನಾಭಾದಿ ಷಟ್ತ್ರಿಂಶಮೂರ್ತಿಗಳು, ವಿಭವಾವ ತಾರಗಳು. ಅಂತರ್ಯಾಮಿತ್ವವನ್ನು ವಿವರಿಸುವಾಗ ಅವು ಎರಡು ವಿಧವಾಗಿರುವುದು ಎಂಬುವುದಾಗಿ ತಿಳಿಸಿ, ಮೊದಲನೆಯದು ಜ್ಞಾನಿಗಳ ಹೃದಯ ಕಮ ಲದಲ್ಲಿ ಲಕ್ಷ್ಮೀಸಮೇತನಾಗಿ ರಮ್ಯವಾದ ವಿಗ್ರಹರೂ ಪದಿಂದ ಸಕಲ ಕರ್ಮ ಸಾಕ್ಷಿಯಾಗಿ ಪ್ರಕಾಶಿಸುತ್ತಾನೆ. ಇನ್ನೊಂದು ಬಗೆ ಜ್ಞಾನಿಗಳಿಂದ ಭಿನ್ನರಾದ ಸಾಮಾ ನ್ಯರ ಆತ್ಮಗಳಲ್ಲಿ ಸ್ವರೂಪ ಮಾತ್ರದಿಂದ ನೆಲೆಸಿರು ತ್ತಾನೆ. ಶ್ರುತಿಗಳು ಸಾರುವಂತೆ "ಅಂತಃ ಪ್ರವಿಷ್ಟ ಶ್ಶಾಸ್ತಾ ಜನಾನಾಂ" ಎಂಬಂತೆ ಕವಿಯ ವಾಕ್ಕು--

ನಿಯತಂ ತದ್ರಚಿತ ಧ್ಯಾ
ನ ಯೋಗ್ಯ ನೆನಿಸುತ್ತ ಕೃತ್ಯಾಕೃ
ತ್ಯ ಯುಗ ಮನಾಲಿಸುಗುಂ ಬುಧ
ಚಯಮಂತರ್ಯಾಮಿ
ಭಾವಮೆಂದೊರೆಗುಮದಂ

ಅರ್ಚಾವತಾರ ವೈಭವವನ್ನು ವರ್ಣಿಸುವಾಗ ಕವಿ ಶ್ರಿಯಃಪತಿಯು ಶ್ರೀವೈಕುಂಠದಲ್ಲೂ ಸೂರ್ಯ ಮಂಡಲ ಮಧ್ಯದಲ್ಲೂ ಕ್ಷೀರಸಮುದ್ರದಲ್ಲೂ ಇದ್ದರೆ

ಭೂಲೋಕದಲ್ಲಿ ಚೇತನರು ತನ್ನನ್ನು ಕಾಣುವುದು ಸಾಧ್ಯವಿಲ್ಲವೆಂದು ಭಾವಿಸಿ ಪರಮ ಕೃಪೆಯಿಂದ ದೀನರಕ್ಷಕನು ದಯಾನಿಧಿಯಾದ ಭಗವಂತನು ಸರ್ವಜನರಿಗೆ ಸುಲಭನಾಗಿ ಶ್ರೀರಂಗಾದಿ ದಿವ್ಯ ಕ್ಷೇತ್ರಗಳಲ್ಲಿ ಅರ್ಚಾರೂಪದಿಂದ ನೆಲೆಸಿನಿಂತ ಅವತಾರ ವಿಶೇಷವನ್ನು ಹೇಳುವಾಗ :--

ದೀನಾವನತ್ವನುಕಂ
ಪಾನಿಧಿ ನೆಗಳ್ದೊಪ್ಪುಗುಂ ಸ್ವಯಂ ವ್ಯಕ್ತಾಪ್ಪ
ಸ್ಥಾನಂ ಗಳೊಳರ್ಚಾ ರೂ
ಪಾನೀಕ ವಿಲಾಸ ಪೂರ್ವರಂಗಾದಿಗಳೊಳ್

ಬ್ರಹ್ಮಾದಿ ದೇವತೆಗಳೂ, ಭೃಗು ಗೌತಮ ಮುಂತಾದ ಸಿದ್ಧಿಪಡೆದ ಋಷಿಗಳು ಪೂಜಿಸಲ್ಪಟ್ಟ ದಿವ್ಯಕ್ಷೇತ್ರಗಳಲ್ಲಿ. ಭಕ್ತರು ಭಕ್ತಿಯಿಂದ ಚಿನ್ನ ಬೆಳ್ಳಿ ತಾಮ್ರ ಮುಂತಾದ ಲೋಹಗಳಿಂದ ಶಿಲೆಗಳಿಂದ ಶಾಸ್ತ್ರೋಕ್ತವಾಗಿ ನಿರ್ಮಿಸಿ ಆಗಮ ಶಾಸ್ತ್ರವಿಧಿಯಿಂದ ಪೂಜಿಸಲ್ಪಡುವ ದೇವಾಲಯಗಳಲ್ಲಿ ಆಶ್ರಿತರಿಗೆ ರಕ್ಷಕನಾಗಿ ತನ್ನ ದಿವ್ಯಸಾನ್ನಿಧ್ಯವನ್ನು ನೆಲೆಗೊಳಿಸಿ, ಅಲ್ಲಿ ಅಪ್ರಾಕೃತ ಪಂಚ ಶಕ್ತಿಮಯವಾಗುವಂತೆ ಕಟಾಕ್ಷಿಸಿ ನೀಡಿ ಸರ್ವರಿಗೂ ಸುಲಭವಾಗಿ ಲಭ್ಯವಾಗಿ ಅರ್ಚಾಮೂರ್ತಿಯಾಗಿ ನಿಂತು ಭಕ್ತರ ಆಸೆಗಳನ್ನು ಪೂರೈಸುವ ಕಲ್ಪತರುವಾಗಿರುತ್ತಾನೆ. ಅರ್ಚಾವತಾರಗಳಲ್ಲೂ ಸ್ವಯಂವ್ಯಕ್ತ, ದೈವ, ಸಿದ್ಧ ಆರ್ಷ ಹಾಗೂ ಮಾನುಷ ಎಂದು ಐದು ವಿಧವಾಗಿದೆ. ಪುರುಷರಿಗೆ ಧರ್ಮ ಅರ್ಥ ಕಾಮ ಮೋಕ್ಷ ಚತುರ್ವಿಧ ಪುರುಷಾರ್ಥಗಳನ್ನು ತಿಳಿಸಿ ಪರಮಾತ್ಮನನ್ನು ಪಡೆಯಲು ಬೇಕಾದ ಉಪಾಯ ಸ್ವರೂಪಗಳನ್ನು ಕವಿ ತಿಳಿಸುತ್ತಾನೆ. ಈ ಉಪಾಯ ಸ್ವರೂಪವು ಕರ್ಮ, ಜ್ಞಾನ, ಭಕ್ತಿ, ಪ್ರಪತ್ತಿ, ಆಚಾರ್ಯಾಭಿಮಾನ ಎಂಬುವ ಐದು ವಿಧವಾದವು. ಪಿಳ್ಳೈ ಲೋಕಾಚಾರ್ಯರು ಉಪಾಯಂಗಳಿಲ್, ಕರ್ಮಯೋಗ ಮಾವದು - ಯಜ್ಞ - ದಾನ - ತಪೋ - ಧ್ಯಾನ - ಸಂಧ್ಯಾವನ - ಪಂಚಮಹಾಯಜ್ಞ - ಅಗ್ನಿಹೋತ್ರ - ತೀರ್ಥಯಾತ್ರ - ಪುಣ್ಯಕ್ಷೇತ್ರವಾಸ - ಕೃಛ್ರ - ಚಾಂದ್ರಾಯಣ - ಪುಣ್ಯನದೀ ಸ್ನಾನ - ವ್ರತ - ಚಾತುರ್ಮಾಸ್ಯ - ಫಲಮೂಲಾಶನ - ಶಾಸ್ತ್ರಾಭ್ಯಾಸ - ಸಮಾರಾಧನ - ಜಪ - ತರ್ಪಣಾದಿ ಕರ್ಮಾನುಷ್ಠಾನತ್ತಾಲ್ ವಂದ ಕಾಯಶೋಷಣತ್ತಾಲೇ ಪಾಪನಾಶನಂ ಪಿರಂದು" ಇತ್ಯಾದಿಗಳಿಂದ ಭಗವಂತನನ್ನು ನೋಡಲು ಮನಸ್ಸಿಗೆ ಹೆಚ್ಚು ಆಸಕ್ತಿ ಉಂಟಾಗುತ್ತದೆ. ಯಮ ನಿಯಮಾಸನ ಪ್ರಾಣಾಮಾಯ ಪ್ರತ್ಯಾಹಾರ - ಧ್ಯಾನ. ಧಾರಣ ಸಮಾಧಿರೂಪವಾದ ಅಷ್ಟಾಂಗಯೋಗ ಕ್ರಮದಿಂದ ಯೋಗಾಭ್ಯಾಸ ಕಾಲದವರೆಗೂ ಜ್ಞಾನಕ್ಕೆ ಪರಮಾತ್ಮನು ವಿಷಯವಾಗಿರುತ್ತಾನೆ. ಪಿಳ್ಳೈ ಲೋಕಾಚಾರ್ಯರು ಇದು ದಾಸ್ ಜ್ಞಾನಯೋಗತ್ತುಕ್ಕು ಸಹಕಾರಿಯಾಯೊ ಐಶ್ವರ್ಯತ್ತುಕ್ಕು ಪ್ರಧಾನಸಾಧನಮಾಯೂ ಯಿರುಕ್ಕುಂ ಎಂಬುವುದಾಗಿ ತಿಳಿಸುವಾಗ ಇದೇ ಚೇತನನಿಗೆ ಮಾನವರಿಗೆ ಕರ್ಮಯೋಗವೆನಿಸುತ್ತೆ ಎಂದರು. ಕವಿ ಕನ್ನಡದಲ್ಲಿ ಈ ವಿಷಯವನ್ನೇ ಕುರಿತು--

ಭಗವತ್ ಕೀರ್ತನ ದರ್ಶನಾದಿ
ವಿಷಯಾತ್ಯಾಸಕ್ತಿ ಚಿತ್ತಕ್ಕೆಪೊ
ದುಗುಮಷ್ಟಾಂಗದ ಯೋಗಮಂ
ಕ್ರಮದಿನೊಲ್ದಭ್ಯಾಸಮಂ ಮಾಳ್ಪಿನಂ
ನೆಗಳುಂ ಜ್ಞಾನಮದರ್ಕೆ ತಾಂ
ವಿಷಯಮಾಗಿರ್ಕುಂ ಪರಾತ್ಮಂ ಮನು
ಷ್ಯಗುಣಕ್ಕಿಂತಿರ್ದು ಕರ್ಮಯೋಗ
ಮೆನಿಸಿರ್ಕುಂ ವೇದಸಾರೋದಿತಂ

ಜ್ಞಾನಯೋಗವನ್ನು ಹೇಳುವಾಗ ಕರ್ಮಯೋಗದಿಂದ ನಿರ್ಮಲಾಂತಃಕರಣನಾದವನು ತನ್ನ ಆತ್ಮನು ಪ್ರಕೃತಿಯುಕ್ತನು ಈಶ್ವರಶೇಷನು ಎಂದು ಯೋಗಕಾಲದಲ್ಲಿ ಚಿಂತಿಸುವುದು "ಧ್ಯೇಯಃ ಸದಾ ಸವಿತೃ ಮಂಡಲಮಧ್ಯವ" ಮುಂತಾದ ಶ್ರುತಿ

# ವಾಚಕರಲ್ಲಿ.....

ಏರುತ್ತಿರುವ ಎಲ್ಲ ರೀತಿಯ ವಸ್ತುಗಳ ಬೆಲೆಗಳ ನಡುವೆ "ಸಪ್ತಗಿರಿ"ಯ ಉತ್ಪಾದನಾ ವೆಚ್ಚವೂ ಏರುತ್ತಿದೆಯಾಗಿ, ತಿ.ತಿ.ದೇ. ಧರ್ಮಕರ್ತರ ಮಂಡಳಿಯ ನಿರ್ಣಯದ ಪ್ರಕಾರ ಏಪ್ರಿಲ್ 1996 ರಿಂದ ಸಪ್ತಗಿರಿಯ ಬೆಲೆಯನ್ನು ನಾಲ್ಕು ರೂಪಾಯಿಗಳಿಗೆ ಏರಿಸಲು ತೀರ್ಮಾನಿಸಲಾಗಿದೆ.

1996 ಏಪ್ರಿಲ್ ತಿಂಗಳಿನಿಂದ ವಾರ್ಷಿಕ ಚಂದಾ ರೂ. 48/- ಆಗಿರುತ್ತದೆ. ವಾರ್ಷಿಕ ಚಂದಾಹಣ ತುಂಬುವವರು ಈ ಹೊಸ ಬೆಲೆಯನ್ನು ಗಮನಿಸಿ ತುಂಬಬೇಕೆಂದು ವಿನಂತಿ.

ಈಗಾಗಲೇ ಚಂದಾದಾರರಾಗಿರುವ ಸದಸ್ಯರ ಉಳಿಕೆ ಹಣವನ್ನು ಹೊಸಬೆಲೆಗೆ ತಕ್ಕಂತೆ ಹೊಂದಿಸಲಾಗುವುದಾಗಿ, ಅವರುಗಳು ತಮ್ಮ ಚಂದಾ ಅವಧಿಯನ್ನು ಸರಿನೋಡಿಕೊಂಡು ಪುನರುದ್ಧರಿಸಬೇಕೆಂದು ವಿನಂತಿ.

ಏಜಂಟರುಗಳು ಏಪ್ರಿಲ್ 1996 ರಿಂದ ತಮ್ಮ ಠೇವಣಿಯನ್ನು ಪ್ರತಿಗಳಿಗೆ ತಕ್ಕಂತೆ ಹೆಚ್ಚಿಸಬೇಕಾಗಿ ವಿನಂತಿ.

## ಸಪ್ತಗಿರಿ

ಬಿಡಿಪ್ರತಿ - ರೂ. 4/- ವಾರ್ಷಿಕ ಚಂದಾ - ರೂ. 48/-

(1996 ಏಪ್ರಿಲ್ ಸಂಚಿಕೆಯಿಂದ)

ಓದುಗರು, ಏಜಂಟರು ಹೊಸ ಬೆಲೆಗೆ ಹೊಂದಿಕೊಂಡು ಸಹಕರಿಸಬೇಕಾಗಿ ವಿನಂತಿ.

ಸಂಪಾದಕರು, ಸಪ್ತಗಿರಿ.

ರೀತಿ ಶಂಖಚಕ್ರ ಗದಾದಿ ದಿವ್ಯಾಯುಧಧರನಾದ ಪೀತಾಂಬರವಿಭೂಷಿತನಾದ ಕಿರೀಟಾದಿ ನೂಪರಾಂತ ದಿವ್ಯಾಭರಣ ಅಲಂಕೃತನಾದ ಲಕ್ಷ್ಮೀನಾರಾಯಣನನ್ನು ಯೋಗಾಭ್ಯಾಸ ಕ್ರಮದಿಂದ ಅನುಭವಿಸಿ ಆ ಜ್ಞಾನದ ಅನವರತ ಧ್ಯಾನವೇ ಭಕ್ತಿಯೋಗಕ್ಕೆ ಸಹಕಾರಿಯಾಗಿ ಕೈವಲ್ಯ ಮುಕ್ತಿಗೆ ಪ್ರಧಾನ ಉಪಾಯವಾಗಿ ಪರಿಣಮಿಸುತ್ತೆ.

ಭಕ್ತಿಯೋಗವೆಂದರೆ, ಏವಂ ವಿಧಸ್ಯತೈಲ ಧಾರಾವದವಿಚ್ಛಿನ್ನ ಸ್ಮೃತಿ ಸಂತಾನ ರೂಪಸ್ಯ 'ಭಗವತ್ ಸ್ವರೂಪ; ರೂಪಗುಣ ವಿಭೂತ್ಯಾದ್ಯನುಭವಜನಿತ ಪ್ರೀತಿ ರೂಪತಾ ಪಾದನಂ ಭಕ್ತಿಯೋಗಃ, ಇದನ್ನೇ ಕವಿ ಸುಲಲಿತ ಕನ್ನಡ ಭಾಷೆಯಲ್ಲಿ--

ಭಕ್ತಿ ಯೋಗಮೆಂತೆನೆ
ಪರಮಾತ್ಮ ವಿಷಯಮಾಗಿರೆ
ಪರಭಕ್ತಿಯುಮೆಂದು
ಪರಮಭಕ್ತಿಯುಮೆಂದುಂ
ಸುರಿವನಲ ತೈಲಧಾರೆಯ
ಪರಿವೊಲ್ ಸ್ಮೃತಿವಿತತಿ ಭಕ್ತಿ ಯೆಂದಿಂತೆಸಗುಂ.

ಅಂತಹ ಭಕ್ತಿಯ ವಿಶೇಷದಿಂದ ಕ್ರಮವಾಗಿ ಪರಮಾತ್ಮನ ಕೃಪೆ ದೋರಿ, ಭಗವನ್ನಾಮ ಸಂಕೀರ್ತನೆ ಅವನ ಕಥಾನುಭವ ರೂಪದಿಂದ ಪ್ರಾರಬ್ಧಕರ್ಮಗಳು ನೀಗಿ ತಾಪತ್ರಯಗಳು ತೊಲಗಿ ವಿಘ್ನಗಳಿಲ್ಲದೆ ಪ್ರಕಾಶಮಾನವಾದ ಪರಮಾತ್ಮನಲ್ಲಿ ಸಮಾಧಿನಿಷ್ಠತೆ ಉಂಟಾಗುತ್ತೆ. ಅಂತಹ ಭಕ್ತಿಯನ್ನು ಇನ್ನೂ ಕವಿಯು ವರ್ಣಿಸುವಾಗ ಹರಿಯಂ ಪೂಜಿಸುತ ಅಚ್ಯುತಂಗೆ ನಮಿಸುತ್ತಂ ಶ್ರೀಶನಂ ಕೀರ್ತಿಸುತ್ತ ರವಿಂದಾಕ್ಷ ಕಥಾಳಿಯಂ ಬಿಡದೆ ಕೇಳುತ್ತಂ ಹೃಷೀಕೇಶ ಕಿಂಕರತಾ ಕೃತ್ಯಮನಾಗಿಸುತ್ತೆ ಮನಮಂ ತದ್ಧ್ಯಾನದೊಳ್ ಸಾರ್ಚುತಂ ಪರಮಾನಂದ ರಸಾಬ್ಧಿಯೊಳ್ ಮುಳುಗುತಿಂತಿರ್ದುರ್ವರಾಭಾಗದೊಳ್.

ಕವಿಯು ೧೧೨ ಪದ್ಯದಲ್ಲಿ ಕರ್ಮಯೋಗ, ಜ್ಞಾನಯೋಗ, ಭಕ್ತಿಯೋಗ ಅನುಷ್ಠಾನ ಅದರ ಫಲ ಬಹುಪ್ರಯಾಸಕರ. ಅದನ್ನು ಆಚರಿಸಲು ನಾವು ಅಶಕ್ತರು. ಚೇತನರನ್ನು ಉದ್ಧಾರ ಮಾಡಲು ಪರಮ ಕರುಣಾಮೂರ್ತಿ ಕಮಲನಾಭನು ಪ್ರಪತ್ತಿಯೋಗವನ್ನು ಉಪದೇಶ ಮಾಡಿದನೆಂದು ತಿಳಿಸುತ್ತಾನೆ. ಸರ್ವಧರ್ಮಾನ್ ಪರಿತ್ಯಜ್ಯ ಮಾಮೇಕಂ ಶರಣಂ ವ್ರಜ ಎಂಬುವಂತೆ ಗೋವಿಂದನ ಪಾದಾರವಿಂದಗಳನ್ನು ಆಶ್ರಯಿಸಿ ನೀನೇಗತಿ ಎಂಬುದಾಗಿ ಶರಣಾಗತನಾದರೆ ಪಾಪಕರ್ಮಗಳಿಂದ ಉಂಟಾದ ಅಜ್ಞಾನದೋಷವನ್ನು ನಿವಾರಿಸಿ ಮುಕ್ತಿಯನ್ನು ಮುಕುಂದನು ನೀಡುತ್ತಾನೆಯೆಂದು ತಿಳಿಸುತ್ತಾನೆ. ಪ್ರಪತ್ತಿಯು ವೇದ ಪುರಾಣಗಳಲ್ಲಿ ಉಕ್ತವಾಗಿದೆ. ಅದನ್ನು ಅನುಷ್ಠಿಸಲು ಸುಲಭ. ಅದು ಶೀಘ್ರ ಫಲಕಾರಿ. ಈ ರಹಸ್ಯವನ್ನು ಲಕ್ಷ್ಮಿಗೆ ಶ್ರೀಮನ್ನಾರಾಯಣನು ಉಪದೇಶಿಸಿದನು. ಅದನ್ನು ಕೇಳಿದ ವಿಷ್ವಕ್ಸೇನನು ತಾನು ಅನುಷ್ಠಾನಕ್ಕೆ ತಂದನು. ಲೋಕೋಜ್ಜೀವನಾರ್ಥವಾಗಿ ಮನುಷ್ಯರಿಗೆ ತಿಳಿಸಲು ಶಠಗೋಪರೆಂಬ ಮಹಾತ್ಮರಾದ ನಮ್ಮಾಳ್ವಾರ್‌ರವರು ಭೂಮಂಡಲದಲ್ಲಿ ಜನಿಸಿ ಪ್ರಚಾರಮಾಡಿದರು. ಇದು ದ್ವಯಮಂತ್ರ ಪ್ರತಿಪಾದಕವಾಗಿದೆ. ಈ ಪ್ರಪತ್ತಿಯೋಗವನ್ನು ನಾರಾಯಣನು ವರಾಹಾವತಾರ ಸಮಯದಲ್ಲಿ ಭೂದೇವಿಗೆ ಉಪದೇಶಿಸಿದನು, ಶ್ರೀರಾಮನು ವಿಭೀಷಣನಿಗೆ ಅಭಯ ಪ್ರದಾನ ಮಾಡಿದಾಗ ಈ ಪ್ರಪತ್ತಿಯೋಗವನ್ನು ಪ್ರಕಟಿಸಿದನು. ನೃಸಿಂಹ ಅವತಾರ ಸಮಯದಲ್ಲಿ ಪ್ರಹ್ಲಾದನನು ಇದನ್ನು ಆಚರಿಸಿದನು. ಪ್ರಪತ್ತಿಗಳಲ್ಲಿ ಆರ್ತ ಪ್ರಪತ್ತಿ ಮತ್ತು ದೃಪ್ತ ಪ್ರಪತ್ತಿ ಎಂಬುವುದಾಗಿ ಎರಡು ವಿಧ. ಆರ್ತ ಪ್ರಪತ್ತಿಯೆಂದರೆ ಭಗವಂತನ ಕೃಪಾ ಕಟಾಕ್ಷೆ ಉಂಟಾಗಿ ಶಾಸ್ತ್ರಾಭ್ಯಾಸದಿಂದಲೂ ಸದಾಚಾರನಾದ ಆಚಾರ್ಯನ ಉಪದೇಶದಿಂದ ತತ್ವಜ್ಞಾನವು ಉಂಟಾಗಿ ಪರಮಾತ್ಮನಿಗೂ ತನಗೂ ಇರುವ ಶೇಷ ಶೇಷೀ ಭಾವದೊಡನೆ ಭಗವಂತನನ್ನು ಅನವರತ ನಂಬಿ ನಿನ್ನ ಚರಣಾರವಿಂದಲೇ ನನಗೆ ಗತಿ ಎಂಬುವುದಾಗಿ ನಂಬುವುದೇ ಆಗಿದೆ. ದೃಪ್ತ ಪ್ರಪತ್ತಿಯಲ್ಲಿ ತನಗೆ ಮತ್ತೊಂದು ಶರೀರದ ಪ್ರಾಪ್ತಿ ಸ್ವರ್ಗನರಕಾದಿ ವಿಷಯದಲ್ಲಿ ವಿರಕ್ತಿ ಭಯ ತೋರಿದಾಗ ಅದರ ನಿವಾರಣೆಗಾಗಿ ಸದಾಚಾರ್ಯರ ಪದಯುಗಳಗಳನ್ನು ಆಶ್ರಯಿಸಿ ಅವರ ಉಪದೇಶದಿಂದ ಶ್ರೀಮನ್ನಾರಾಯಣನ ಪಾದಾರವಿಂದಗಳಲ್ಲಿ ಉಪಾಯ ಸ್ವೀಕಾರವನ್ನು ಮಾಡಿ ಮನಸಾ, ವಾಚಾ, ಕಾಯಾ ಪರಮಾತ್ಮನ ಸ್ವರೂಪವನ್ನು ಸದಾ ಅನುಸಂದಾನ ಮಾಡುತ್ತಾ ನೀ ನಮ್ಮನ್ನು ಬಿಟ್ಟರೆ ಅನ್ಯಥಾ ಶರಣಂ ನಾಸ್ತಿ ಎಂದು ಭಗವಂತನಲ್ಲಿ ಪೂರ್ಣನಂಬಿಕೆ ಇಟ್ಟು ಸಕಲ ಭಾರವನ್ನೂ ಭಗವಂತನಿಗೆ ಒಪ್ಪಿಸುವ ಪ್ರಪತ್ತಿಗೆ - ದೃಪ್ತ ಪ್ರಪತ್ತಿಯೆಂದು ಹೆಸರು. ಪ್ರಪತ್ತಿಗೆ ಅನುಕೂಲಸ್ಯ ಸಂಕಲ್ಪ, ಪ್ರಾತಿಕೂಲ್ಯನಿವೃತ್ತಿ, ರಕ್ಷಿಸುವನು ಎಂಬುವ, ವಿಶ್ವಾಸ ಗೋಪ್ತೃತ್ವ ವರಣ ನೀನೇ ನನ್ನನ್ನು ರಕ್ಷಿಸಬೇಕು ಎಂದು ಪ್ರಾರ್ಥಿಸುವ ಬುದ್ಧಿ - ಆತ್ಮನಿಕ್ಷೇಪ ಕಾರ್ಪಣ್ಯ, ತಾನು ಸತ್ಕುಲ ಪ್ರಸೂತನೆಂಬ ಹಲವಾರು ಗರ್ವಗಳನ್ನು ತ್ಯಜಿಸುವುದು ಈ ಐದು ಅಂಗಗಳು ಪ್ರಪತ್ತಿಗೆ (ಶರಣಾಗತಿಗೆ) ಅಂಗಗಳೆಂದು ಕವಿ ವಿವರಿಸುತ್ತಾನೆ. ಪರಮಾತ್ಮನನ್ನು ಪಡೆಯಲು ಅಡ್ಡಿಯಾಗುವಂತಹ ವಿರೋಧಿಸ್ವರೂಪಗಳನ್ನು ೧೪೯ ೫ ಪದ್ಯಗಳಲ್ಲಿ ವಿವರಿಸುತ್ತಾನೆ. ಪ ರುಷಾರ್ಥವಿರೋಧಿ ಪ್ರಾಪ್ಯವಿರೋಧಿ, ಸ್ವಾಭಿಮಾನ ಮುಂತಾದ ಅಹಂಕಾರಗಳು ಸ್ವರೂಪವಿರೋಧಿಯೆಂದು ತಿಳಿಸಿ ಇಪ್ಪತ್ತೇಳು ತೆರದ ವಿರೋಧಗಳನ್ನು ಕವಿ ವಿವರಿಸುತ್ತಾನೆ. ಹಿರಿಯರೂ ಗುರುಗಳೂ ಬಂದರೆ ಪ್ರೀತಿಯಿಂದ ಭಕ್ತಿಯಿಂದ ಕಾಣಬೇಕು. ಅವರು ಬಂದಕೂಡಲೇ ಎದ್ದು ಹೋಗದಿರುವುದು. ಕಂಡಾಗ ಅಹಂಕಾರದಿಂದ ಮಾತನಾಡುವುದೂ ವಿರೋಧಗಳೆಂದು ತಿಳಿಸಿ ನಾವು ಪ್ರತಿಯೊಬ್ಬರೂ, ಪ್ರತಿನಿತ್ಯ ಮಾಡುವ ತಪ್ಪುಗಳಲ್ಲಿ ಒಂದನ್ನು ಬಹು ಸರಳವಾಗಿ ಹೇಳುತ್ತಾ ಕವಿ-

ಪಿರಿಯರ್ ಗುರುಗಳ್ ಬಂದೊಡೆ
ಹರಿಯಾರಾಧನ ತಪೋ ಜಪಾದಿ ವಿಧಿಗಳಂ
ವಿರಿಚಿಸುವೆಂ ತಮಗೀಗಳ್
ದೊರೆಕೊಳ್ಳದು ಸಮಯಮೆಂದುದಾಸಿಪ
ಬಗೆಯುಂ

ಹಿರಿಯರು, ಗುರುಗಳು ತಮ್ಮ ಮನೆಗೆ ಬಂದರೆ ದೇವತಾರಾಧನೆ ಜಪತಪಗಳನ್ನು ನಾನು ಮಾಡುತ್ತಿದ್ದೇನೆ ಎಂದು ಅವರನ್ನು ಕಾಯಿಸುವುದು. ಉದಾಸೀನಮಾಡುವುದೂ ಸ್ವರೂಪವಿರೋಧಿಯೆಂದು ಚಿಕುಪ್ಪಧ್ಯಾಯನ ಮತ. ಇವು ಭಾಗವತಾಪಚಾರವೂ ಕೂಡ. ನಿಗಮಾಂತ ಮಹಾದೇಶಿಕರು ತಮ್ಮ ರಹಸ್ಯ ಕ್ರಮಸಾರದ ನಾಲ್ಕನೆಯ ಅರ್ಥ ಪಂಚಕಾಧಿಕಾರದಲ್ಲಿ ಅತ್ಯಂತ ಶ್ರೇಷ್ಠವಾದ ಪ್ರಾಪ್ಯವಸ್ತು ಸರ್ವಶೇಷಿಯಾದ ಬ್ರಹ್ಮ ನಾನು ಅವನಿಗೆ ಅನುಗುಣವಾದ ಪ್ರಾಪ್ತಾ, ಮಗನಿಗೆ ತಂದೆಯಿಂದ ಆಸ್ತಿ ವಿಭಾಗವು ಬಂದಂತೆ ಪ್ರಾಪ್ತಿ. ಶೇಷ ಶೇಷಿ ಸಂಬಂಧ ಜ್ಞಾನದ ಅಭಾವದಿಂದ ಪ್ರಾಪ್ತಿ ವಿರೋಧಿಯಿಂದ ಅದನ್ನು ಕಳೆದು ಕೊಂಡಿದ್ದೇನೆ. ಅದನ್ನು ಪಡೆಯಲು ದಾಟಲು ಸಾಧ್ಯವಾಗುವ ಸೇತುವೆ (ಪ್ರಾಪ್ತಿ - ಉಪಾಯ) ವೆಂದರೆ ಲಕ್ಷ್ಮೀ ನಾರಾಯಣರಲ್ಲಿ - ಶೇಷದಂಪತಿ ಭರನ್ಯಾಸಸ್ತುಮೇ ಶಿಷ್ಯತಿ ಎಂಬುವುದಾಗಿ ತಿಳಿಸಿರುವ ಕ್ರಮವನ್ನೇ ಚಿಕುಪಾಧ್ಯಾಯರು--

ಅವರ್ಗಭಿಮತನಾಗಿರುತಂ
ವಿವರಿಸುತಂ ತನ್ನನೈಚ್ಯಮಂ ನಿತ್ಯಂ ತಾ
ನವರನು ಮತಿಯಿಂದಂ ಮಾ
ಧವನಡಿಯೊಳ್ ಪಾರತಂತ್ರ್ಯಮಂ ಸೊಲ್ಲಿಸುತಂ

ಆಚಾರ್ಯರ ನೇಮನವಂತೆ ನೈಚ್ಯಾನುಸಂಧಾನ ಮಾಡುತ್ತಾ ಅವರ ಅಪ್ಪಣೆಯಂತೆ ಶ್ರೀಮನ್ನಾರಾಯಣನ ಪಾದಾರವಿಂದಗಳಲ್ಲಿ ಶರಣಾಗತಿಯನ್ನು ಮಾಡುವುದೇ ಪರಮ ಪುರುಷಾರ್ಥ. ಕವಿ ಕೊನೆಯ ೩೩೪ ಪದ್ಯದಲ್ಲಿ ಅರ್ಥ ಪಂಚಕ ಜ್ಞಾನವನ್ನು ತಿಳಿದ ಜನರಿಗೆ ಜಯ, ಶುಭ, ಮಂಗಳವನ್ನು ನೀಡಲಿ ಎಂಬುವುದಾಗಿ ಕೃತಿಯನ್ನು ಮುಗಿಸುತ್ತಾನೆ--

ಶ್ರೀ ವರದನರ್ಥ ಪಂಚಕ
ಭಾವಜ್ಞ ಜನೇಷ್ಟದಾಯಿ ಯೆಮಗೆಲ್ಲ ನಿಶಂ
ಪಾವನ ಭಕ್ತಿಯನೀ ಕೃತಿ
ಗಾವಗಮೊದವಿಸುಗೆ ಜಯ ಶುಭಂ ಕಲ್ಯಾಣಂ

☆☆☆☆☆☆☆

# ತಿರುಮಲೆಯ ಯಾತ್ರಿಕರಿಗೆ ವಿಶೇಷ ಸೌಲಭ್ಯಗಳು

* ಎಲ್ಲ ವರ್ಗಗಳವರಿಗೂ ಉಚಿತವಾಗಿ ದೊರೆಯುವ ಪರಿಶುದ್ಧ ಸತ್ರಗಳು ಅಥವಾ ಸುಲಭ ದರದಲ್ಲಿ ದೊರೆಯುವ ಬೀಡುಗಳ ವಸತಿ ಸೌಕರ್ಯ.

* ವೆಂಕಟೇಶ್ವರಸ್ವಾಮಿ ದರ್ಶನದ ಯಾತ್ರಿಕರ ಕಾಯುವ ಕೋಣೆಗಳಲ್ಲಿ (ವೈಕುಂಠ) ಗಾಳಿ ಬೆಳಕುಗಳ ವ್ಯಾಪಕ ಏರ್ಪಾಡು.

* ಸರತಿಯ ಸಾಲಿನ ಕೋಣೆಗಳಲ್ಲಿ ಅಲ್ಪಾಹಾರ ಸೌಲಭ್ಯ

* ಸುಲಭದರದ ಆಹಾರದ ಪೊಟ್ಟಣಗಳ ಮಾರಾಟ.

* ಸರತಿಯ ಸಾಲಿನ ಕೋಣೆಗಳಿಂದ ಹೊರಹೋಗಬೇಕಾದ ಅಗತ್ಯವಿಲ್ಲದಂತೆ ಶೌಚ ಗೃಹಗಳು.

* ಆಂಧ್ರಪ್ರದೇಶ್ ಹಯನೋತ್ಪಾದನಾವಿತರಣೆ ಇಲಾಖೆಯವರಿಂದ ಶುದ್ಧ ಹಾಲಿನ ಮಾರಾಟ.

* ಯಾತ್ರಿಕರ ವಾಚನಾಭಿರುಚಿಯನ್ನು ಹೆಚ್ಚಿಸುವ ತಿ.ತಿ.ದೇ. ಪ್ರಕಟಣೆಗಳಾದ ಪುಸ್ತಕಗಳು, ದೈವಚಿತ್ರಗಳ ಮಾರಾಟ.

* ಸರತಿಯ ಸಾಲಿನ ಯಾತ್ರಿಕರಿಗೆ ಉಲ್ಲಾಸಕರವಾದ ಟೆಲಿವಿಷನ್‌ಪ್ರದರ್ಶನ, ಭಕ್ತಿ ಸಂಗೀತ.

* ಸರತಿಯ ಸಾಲು ಹಾಗೂ ತಿರುಮಲೆಯ ಕಾಲುಹಾದಿಯ ೭-ನೇ ಮೈಲಿಯ ಬಳಿ ವೈದ್ಯಸೌಲಭ್ಯ ಉಪಹಾರ ಸೌಲಭ್ಯ ಕ್ಯಾಂಟೀನ್.

* ಯಾತ್ರಿಕರ ವಸ್ತುಗಳು, ಪಾದರಕ್ಷೆಗಳ ರಕ್ಷಣೆಗಾಗಿ ಪ್ರತ್ಯೇಕ ಸೌಲಭ್ಯ

* ತಿರುಮಲೆಯ ಸ್ವಾಗತ ಕಚೇರಿಯಿಂದ ವಿವಿಧ ಸ್ಥಳಗಳಿಗೆ ಆಟೋ ಸೌಕರ್ಯ ಹಾಗೂ ಉಚಿತ ಬಸ್ ಸೌಕರ್ಯ.

* ತಿರುಮಲೆಗೆ ನಡೆದು ಹೋಗುವವರ ವಸ್ತುಗಳನ್ನು ಸುರಕ್ಷಿತವಾಗಿ ತಿರುಮಲೆಗೆ ಸೇರಿಸುವ ಅನುಕೂಲ.

* ಯಾತ್ರಿಕರನ್ನು ಪಂಡಾಗಳು, ವಂಚಕರಿಂದ ತಪ್ಪಿಸಲು ಪೇಷ್ಕಾರ್ ಪದವಿಯ ಅಧಿಕಾರಿಯನ್ನು ಮಹಾದ್ವಾರದಲ್ಲಿ ನೇಮಿಸುವಿಕೆ.

* ಸರತಿಯ ಸಾಲಿನ ಕೋಣೆಗಳ ಯಾತ್ರಿಕರ ದೂರುಗಳ ವಿಚಾರಣೆಗಾಗಿ, ಅನುಕೂಲಗಳ ಏರ್ಪಾಡಿಗಾಗಿ ಪೇಷ್ಕಾರ್ ಪದವಿಯ ಮತ್ತೊಂದು ಅಧಿಕಾರಿ ಮತ್ತು ಸಿಬ್ಬಂದಿ.

**ದೇವಸ್ಥಾನದ ಪ್ರಯತ್ನಗಳಲ್ಲಿ ಇವು ಕೆಲವು ಮಾತ್ರವೇ.**

ಗಮನಿಕೆ: ತಿರುಮಲೆಯಲ್ಲಿ ಅಂಚೆ ಕಚೇರಿಯು ರಾತ್ರಿ ೮--೩೦ ಗಂಟೆಯವರೆಗೆ ಕೆಲಸಮಾಡುತ್ತದೆ. ಜೊತೆಗೆ ಪ್ರಧಾನ ಅಂಚೆ ಕಚೇರಿಯು ರಾತ್ರಿ ೧೦-೩೦ ರಿಂದ ೧--೦೦ ಗಂಟೆಯವರೆಗೆ ಕೆಲಸಮಾಡುತ್ತದೆ.

# ತೈತ್ತಿರೀಯ ಪ್ರಾರ್ಥನೆ

---ಸ್ವಾಮಿ ಪುರುಷೋತ್ತಮಾನಂದಜಿ.

ಈ ಭೂಲೋಕದಲ್ಲಿ ಸಮಗ್ರವಾದ ಜ್ಞಾನವನ್ನು ಒಳಗೊಂಡಂತಹ ಒಂದು ಗ್ರಂಥವಿದ್ದರೆ ಅದು ವೇದ. ಈ ವೇದ ಯಾವೊಬ್ಬ ಮನುಷ್ಯನಿಂದ ರಚಿತವಾದ ಗ್ರಂಥವಲ್ಲ. ಆದ್ದರಿಂದಲೇ ವೇದವನ್ನು "ಅಪೌರುಷೇಯ" ಎಂದು ಕರೆಯಲಾಗಿದೆ. ಅಪೌರುಷೇಯ ಎಂದರೆ, ಪುರುಷ ನಿರ್ಮಿತ ಅಲ್ಲ ಎಂದು ಅರ್ಥ. ಹಾಗಾದರೆ ಈ ವೇದ ಎಲ್ಲಿಂದ ಬಂತು ಎಂದರೆ ಸ್ವಯಂ ಭಗವಂತನಿಂದಲೇ-

ಯೋ ಬ್ರಹ್ಮಾಣಂ ವಿಧದಾತಿ ಪೂರ್ವಂ
ಯೋ ವೈ ವೇದಾಂಶ್ಚ ಪ್ರಹಿಣೋತಿ ತಸ್ಮೈ

ಪ್ರತಿಯೊಂದು ಕಲ್ಪದ ಆದಿಯಲ್ಲಿಯೂ ಸ್ವಯಂ ಭಗವಂತನೇ ಚತುರ್ಮುಖ ಬ್ರಹ್ಮನನ್ನು ಸೃಷ್ಟಿಸಿ ಆತನಿಗೆ ಅತ್ಯುತ್ತಮವಾದ ವೇಧವನ್ನು ಧಾರೆ ಎರೆಯುತ್ತಾನೆ. ಈ ವೇದದಲ್ಲಿ ಎರಡು ಪ್ರಧಾನ ವಿಭಾಗಗಳಿವೆ. ಒಂದು ಕರ್ಮಕಾಂಡ ಇನ್ನೊಂದು ಜ್ಞಾನಕಾಂಡ. ಸ್ವರ್ಗಲೋಕವೇ ಮೊದಲಾದ ಲೋಕಾಂತರಗಳನ್ನು ಬಯಸುವುದಕ್ಕೆ ಇಚ್ಛೆಯುಳ್ಳವರು ಅಥವಾ ಬಯಸುವವರು ಕರ್ಮಕಾಂಡದಿಂದ ಯಜ್ಞಯಾಗಾದಿಗಳನ್ನು ಮಾಡಿ ಪ್ರಯೋಜನವನ್ನು ಪಡೆಯುತ್ತಾರೆ. ಆತ್ಮಜ್ಞಾನದಿಂದ ನಿತ್ಯಾನಂದವನ್ನು ಬಯಸುವವರು ಜ್ಞಾನಕಾಂಡದಿಂದ ಪ್ರಯೋಜನ ಪಡೆಯುತ್ತಾರೆ. ಈ ಜ್ಞಾನಕಾಂಡದಲ್ಲಿ ಎಲ್ಲ ಪ್ರಮುಖ ಉಪನಿಷತ್ತುಗಳು ಸೇರಿಕೊಂಡಿವೆ. ವೇದ ಒಂದೇ. ಇದೊಂದು ಅಪಾರ ಜ್ಞಾನರಾಶಿ. ಈ ವೇದವನ್ನು ಕೃಷ್ಣದ್ವೈಪಾಯನ ವೇದವ್ಯಾಸರು ೪ ಭಾಗಗಳನ್ನಾಗಿ ಮಾಡಿದ್ದಾರೆ. ಈ ೪ ವೇದಗಳೇ ಋಗ್ವೇದ, ಯಜುರ್ವೇದ, ಸಾಮವೇದ, ಅಥರ್ವವೇದ. "ವೇದವ್ಯಾಸ" ಎನ್ನುವ ಹೆಸರೇ ವೇದವನ್ನು ವಿಭಜಿಸಿದವರು ಎನ್ನುವ ಅರ್ಥವನ್ನು ಸೂಚಿಸುತ್ತದೆ. ವೇದವ್ಯಾಸರು ಹೀಗೆ ವೇದವನ್ನು ವಿಭಜನೆ ಮಾಡಿ ಋಗ್ವೇದವನ್ನು ಪೈಲರಿಗೂ, ಯಜುರ್ವೇದವನ್ನು ವೈಶಂಪಾಯನರಿಗೂ, ಸಾಮವೇದವನ್ನು ಜೈಮಿನಿಗೂ, ಅಥರ್ವವೇದವನ್ನು ಸುಮಂತುವಿಗೂ ಉಪದೇಶಿಸುವರು. ಈ ಭಾರತದಲ್ಲಿ ಪ್ರತಿಯೊಬ್ಬ ಸಂಪ್ರದಾಯಸ್ಥ ಹಿಂದುವೂ ಕೂಡ ಈ ೪ ವೇದಗಳಲ್ಲಿ ಒಂದಲ್ಲ ಒಂದು ವೇದ ಪರಂಪರೆಗೆ ಸೇರಿದವನಾಗಿರುತ್ತಾನೆ. ಶ್ರೀರಾಮಕೃಷ್ಣರು ಯಜುರ್ವೇದ ಪರಂಪರೆಯಲ್ಲಿ ಜನಿಸಿ ಬಂದವರು. ಈ ಯಜುರ್ವೇದದಲ್ಲಿ ಎರಡು ಭಾಗಗಳಿವೆ. ಒಂದು ಶುಕ್ಲಯಜುರ್ವೇದ ಇನ್ನೊಂದು ಕೃಷ್ಣಯಜುರ್ವೇದ. "ತೈತ್ತಿರೀಯ ಉಪನಿಷತ್ತು" ಈ ಕೃಷ್ಣಯಜುರ್ವೇದಕ್ಕೆ ಸಂಬಂಧಪಟ್ಟಂತಹ ಒಂದು ಶಾಖೆ. ಈ ಉಪನಿಷತ್ತಿಗೆ ತೈತ್ತಿರೀಯ ಎಂದು ಹೆಸರು ಬರಲು ಒಂದು ಸ್ವಾರಸ್ಯಕರವಾದ ಕಥೆ ಇದೆ. ವೇದವ್ಯಾಸರಿಂದ ಯಜುರ್ವೇದವನ್ನು ಪಡೆದ ವೈಶಂಪಾಯನರು ಅದನ್ನು ಶಿಷ್ಯರಿಗೆ ಬೋಧಿಸುತ್ತ ಒಂದೊಮ್ಮೆ ತಮ್ಮ ಅತಿ ಪ್ರತಿಭಾವಂತ ವಿದ್ಯಾರ್ಥಿ ಯಾಜ್ಞವಲ್ಕ್ಯರೊಡನೆ ಭಿನ್ನಾಭಿಪ್ರಾಯ ಹೊಂದಿ, ತಾವು ಉಪದೇಶಿಸಿದ ಯಜುರ್ವೇದವನ್ನು ಹಿಂದಿರುಗಿಸಲು ಹೇಳುವರು. ಯಾಜ್ಞವಲ್ಕ್ಯರು ಯಜುರ್ವೇದವನ್ನು ವಮನ ಮಾಡಿದ ನಂತರ, ಅಲ್ಲಿದ್ದ ಇತರ ಶಿಷ್ಯರು ತಿತ್ತಿರಿ ಪಕ್ಷಿಗಳಾಗಿ ಅದನ್ನು ಪುನಃ ಪಡೆದರು.



ಅಂದಿನಿಂದ ಈ ತಿತ್ತಿರಿ ಪಕ್ಷಿಗಳ ಹೆಸರಿನಿಂದ ಆ ವೇದ ಪ್ರಸಿದ್ಧವಾಯಿತು. ಆದ್ದರಿಂದ ಈ ಯಜುರ್ವೇದವನ್ನು ತೈತ್ತಿರೀಯ ಸಂಹಿತೆ, ತೈತ್ತಿರೀಯ ಆರಣ್ಯಕ, ತೈತ್ತಿರೀಯ ಉಪನಿಷತ್ತು ಎಂದು ಕರೆಯಲಾಗಿದೆ. ಯಾಜ್ಞವಲ್ಕ್ಯರು ಆ ವೇದವನ್ನು ವಮನ ಮಾಡಿದರೂ ಕೂಡ ಅದನ್ನು ಪಡೆಯಬೇಕೆಂಬ ಅಪೇಕ್ಷೆಯಿಂದ ಸೂರ್ಯದೇವನ ಕುರಿತಾಗಿ ತಪಸ್ಸಿಗೆ ಕುಳಿತು ಬಿಡುತ್ತಾರೆ. ಸೂರ್ಯದೇವನ ಅನುಗ್ರಹವನ್ನು ಪಡೆಯುತ್ತಾರೆ. ಸೂರ್ಯದೇವ 'ವಾಜಿ' ರೂಪದಿಂದ ಅಂದರೆ ಕುದುರೆಯ ರೂಪದಿಂದ ಬಂದು ಅದೇ ಯಜುರ್ವೇದವನ್ನು ಯಾಜ್ಞವಲ್ಕ್ಯರಿಗೆ ಉಪದೇಶಿಸುತ್ತಾನೆ. ಹೀಗೆ ಇದು ಜ್ಯೋತಿರ್ಮಯನಾದ ಸೂರ್ಯದೇವನಿಂದ ಉಪದೇಶಿಸಲ್ಪಟ್ಟಿದ್ದಕ್ಕೆ ಶುಕ್ಲಯಜುರ್ವೇದ ಎಂದು ಹೆಸರು. ಶುಕ್ಲ ಎಂದರೆ ಬಿಳಿ ಎಂದರ್ಥ. ಮತ್ತು ಸೂರ್ಯದೇವ ವಾಜಿರೂಪದಿಂದ ಬಂದು ಉಪದೇಶಿಸಿದ್ದಕ್ಕೆ ಇದಕ್ಕೆ ವಾಜಸನೇಯ ಎಂದು ಹೇಸರು ಬಂತು.

ಈಗ ಉಪನಿಷತ್ತು ಎಂದರೇನು? ಉಪನಿಷತ್ತು ಎನ್ನುವ ಶಬ್ದ ತುಂಬಾ ಅರ್ಥಪೂರ್ಣ. ಈ ಶಬ್ದದಲ್ಲಿ ೩ ಅಂಶಗಳಿವೆ ಉಪ, ನಿ, ಸದು. 'ಉಪ' ಎಂದರೆ ಹತ್ತಿರ ಎಂದರ್ಥ. 'ನಿ' ಎಂದರೆ ನಿಶ್ಚಯವಾಗಿಯೂ ಎಂದರ್ಥ. 'ಸದ್' ವಿಶರಣ, ಗತಿ ಅವಸಾದನ ಎಂದು ಅರ್ಥ. ವಿಶರಣ ಎಂದರೆ ನಾಶಪಡಿಸುವುದು. ಈ ಅರ್ಥದ ಪ್ರಕಾರ ಉಪನಿಷತ್ತು ಎಂದರೆ, ಜೀವಾತ್ಮನ ಸಂಸಾರ ಬೀಜವನ್ನು ನಾಶಪಡಿಸಿ ಅವನನ್ನು ಪರಬ್ರಹ್ಮದೊಂದಿಗೆ ಸೇರಿಸುವಂತಹ ಬ್ರಹ್ಮವಿದ್ಯೆ ಎಂದು ಅರ್ಥವಾಗುತ್ತದೆ. ಜೀವಾತ್ಮ ಆ ಪರಬ್ರಹ್ಮನೊಂದಿಗೆ ಸೇರಿಕೊಳ್ಳುವಂತಾದಾಗ ಅವನ ಜನನ ಮರಣಗಳೆಂಬ ಪಾಶ ಕತ್ತರಿಸಿಹೋಗಿ ಅವನು ಅಮರನಾಗುತ್ತಾನೆ. ಅವನ ಶೋಕ ಮೋಹಗಳೆಲ್ಲ ನಾಶವಾಗಿ ಅಮೃತಾನಂದವನ್ನು ಅನುಭವಿಸುವಂತಾಗುತ್ತಾನೆ. ಹೀಗೆ ಜೀವಿಯನ್ನು ಜನನ ಮರಣಗಳಿಂದ ಪಾರುಮಾಡಿ ಅಮೃತತ್ವವನ್ನು ಪ್ರಾಪ್ತಿಮಾಡಿಕೊಡುವಂತಹ ಈ ಬ್ರಹ್ಮವಿದ್ಯೆಗೆ 'ಉಪನಿಷತ್ತು' ಎಂದು ಹೆಸರು. 'ತೈತ್ತಿರೀಯ ಉಪನಿಷತ್ತು' ಒಂದು ಸುಂದರವಾದ ಉಪನಿಷತ್ತು. ಈ ಉಪನಿಷತ್ತನ್ನು ಉಚ್ಚರಿಸುವುದಕ್ಕೆ ಒಂದು ಕ್ರಮಬದ್ಧವಾದ ಸ್ವರದ ವ್ಯವಸ್ಥೆಯಿದೆ. ಇದರಲ್ಲಿ ಪುಟ್ಟ ಪುಟ್ಟ ವಾಕ್ಯಗಳ ಮೂಲಕ ಘನತತ್ವಗಳನ್ನು ವರ್ಣಿಸುತ್ತಾ ಹೋಗಲಾಗಿದೆ. ಈ ಉಪನಿಷತ್ತು ಕ್ರಮಾಗತವಾಗಿ ಹೆಜ್ಜೆ ಹೆಜ್ಜೆಯಾಗಿ ನಮ್ಮನ್ನು ಬ್ರಹ್ಮಜ್ಞಾನದ ಕಡೆಗೆ ಕರೆದುಕೊಂಡು ಹೋಗುತ್ತದೆ. ತೈತ್ತಿರೀಯ ಉಪನಿಷತ್ತಿನಲ್ಲಿ ೩ ವಲ್ಲಿಗಳಿವೆ. ವಲ್ಲಿಗಳು ಎಂದರೆ ಅಧ್ಯಾಯಗಳು. ಈ ೩ ವಲ್ಲಿಗಳು ಯಾವುವೆಂದರೆ ಶಿಕ್ಷಾವಲ್ಲಿ, ಆನಂದವಲ್ಲಿ, ಭೃಗುವಲ್ಲಿ ಎಂದು. ಪ್ರತಿಯೊಂದು ಉಪನಿಷತ್ತಿಗೂ ಒಂದೊಂದು ಶಾಂತಿ ಮಂತ್ರ ಇರುವಂತೆ ತೈತ್ತಿರೀಯ ಉಪನಿಷತ್ತಿಗೂ ಒಂದು ಶಾಂತಿಮಂತ್ರ ಇದೆ. ಈ ಶಾಂತಿಮಂತ್ರವನ್ನು ಗುರುಗಳು ಮತ್ತು ಶಿಷ್ಯರು ಕೂಡಿ ಹೇಳುವುದು ಒಂದು ಕ್ರಮ. ಪಾಠಪ್ರವಚನಕ್ಕೆ ಮೊದಲು

ಇದನ್ನು ಹೇಳಿಯೇ ಪ್ರಾರಂಭಿಸಬೇಕು. ಈ ಶಾಂತಿ ಮಂತ್ರ ಎನ್ನುವುದು ಉದಾತ್ತಭಾವದಿಂದ ಕೂಡಿದಂತಹ ಪ್ರಾರ್ಥನೆ. ಪ್ರವಚನ ಮಾಡುವುದಕ್ಕೇ ಆಗಲಿ, ಪ್ರವಚನವನ್ನು ಕೇಳಿ ಅಧ್ಯಯನ ಮಾಡುವುದಕ್ಕೇ ಆಗಲಿ ಯಾವುದೇ ಬಗೆಯ ಅಡಚಣೆಗಳು, ಆತಂಕಗಳು ಬಾರದಂತಾಗಲಿ ಎನ್ನುವುದಕ್ಕೇ ಈ ಪ್ರಾರ್ಥನೆ. 'ಶ್ರೇಯಾಂಸಿ ಬಹುವಿಘ್ನಾನಿ' ಶುಭಕರವಾದ ಕಾರ್ಯಗಳಿಗೆ ಬಹು ವಿಘ್ನಗಳು ಎನ್ನುವ ಮಾತಿದೆ. ಆತರೆ ವಿಘ್ನಗಳು ಬರುತ್ತವೆ ಎಂದು ಕಾರ್ಯಗಳನ್ನು ಮಾಡದೆ ಇರುವುದಕ್ಕಾಗುತ್ತದೆಯೇ? ನಮ್ಮ ಜೀವಿತದ ಅಲ್ಪಾವಧಿಯಲ್ಲಿ ಎಷ್ಟೆಷ್ಟು ಒಳ್ಳೆಯದನ್ನು ಮಾಡಬೇಕೆಂದು ಮನಸ್ಸು ಮಾಡುತ್ತೇವೆಯೋ ಅವುಗಳನ್ನೆಲ್ಲ ಮಾಡಿಬಿಡಬೇಕು. ಆದರೆ ಅಡೆತಡೆಗಳು ಬಾರದಂತೆ ಭಗವಂತನನ್ನು, ಸರ್ವಶಕ್ತನಾದ ಭಗವಂತನನ್ನು ಪ್ರಾರ್ಥಿಸಿಕೊಳ್ಳಬೇಕು. ಇಲ್ಲಿ ಒಂದು ಪ್ರಶ್ನೆ ಏಳಬಹುದು. ಏನೆಂದರೆ, ನಾವು ಮಾಡುವ ಒಳ್ಳೆಯ ಕಾರ್ಯದ ವಿಷಯವಾಗಿ ಭಗವಂತನಿಗೆ ಗೊತ್ತಿರುವುದಿಲ್ಲವೇ? ಅಂತ ನಿಜ ಗೊತ್ತಿದೆ. ಆದರೆ ಅವನನ್ನು ನಾವು ಬಾಯಿಬಿಟ್ಟು ಕೇಳುವುದರಿಂದ ಅವನಿಗೂ ಸಂತೋಷ, ಮತ್ತು ಇದು ನಮ್ಮ ವಿನಯವನ್ನೂ ವ್ಯಕ್ತಪಡಿಸುತ್ತದೆ. ಮಗುವಿಗೆ ಯಾವಾಗ ಹಸಿವಾಗುತ್ತದೆ ಎಂದು ತಾಯಿಗೆ ಗೊತ್ತಿದ್ದರೂ ಕೂಡ ಮಗು ಅತ್ತು ಕರೆದಾಗ ತಾಯಿಗೊಂದು ಸಂತೋಷ. ಮಗು ಅತ್ತಾಗ ತಾಯಿ ಎದ್ದು ಓಡಿಬರುತ್ತಾಳೆ ಸಹಾಯಕ್ಕೇ, ಹಾಗೆಯೇ, ಭಗವಂತನಿಗೆ ನಾವು ಮಾಡುವಂತಹ ಶುಭಕಾರ್ಯ ತಿಳಿದಿದ್ದರೂ ಕೂಡ ಅವನ ಕೃಪೆಯನ್ನು ಅವನ ರಕ್ಷಣೆಯನ್ನು ಕೇಳಿಮುಂದುವರೆಯುವುದು ಶ್ರೇಯಸ್ಕರ. ಆದ್ದರಿಂದ ಈ ಉಪನಿಷತ್ತಿನಲ್ಲಿ ಪ್ರಾರ್ಥನೆಯಿಂದಲೇ ಪ್ರವಚನ ಪ್ರಾರಂಭವಾಗುತ್ತದೆ.

ಶ್ರೀ ಗುರುಭ್ಯೋ ನಮಃ ಹರಿಃ ಓಮ್
ಶಂ ನೋ ಮಿತ್ರಃ ಶಂ ವರುಣಃ
ಶಂ ನೋ ಭವತ್ವರ್ಯಮಾ
ಶಂ ನ ಇಂದ್ರೋ ಬೃಹಸ್ಪತಿಃ
ಶಂ ನೋ ವಿಷ್ಣುರುರುಕ್ರಮಃ
ನಮೋ ಬ್ರಹ್ಮಣೇ ನಮಸ್ತೇ ವಾಯೋ
ತ್ವಮೇವ ಪ್ರತ್ಯಕ್ಷಂ ಬ್ರಹ್ಮಾಸಿ
ತ್ವಾಮೇವ ಪ್ರತ್ಯಕ್ಷಂ ಬ್ರಹ್ಮವದಿಷ್ಯಾಮಿ
ಋತಂ ವದಿಷ್ಯಾಮಿ ಸತ್ಯಂ ವದಿಷ್ಯಾಮಿ
ತನ್ಮಾಮವತು ತದ್ವಕ್ತಾರಮವತು
ಅವತು ಮಾಮ್ ಅವತು ವಕ್ತಾರಮ್
ಓಂ ಶಾಂತಿಃ ಶಾಂತಿಃ ಶಾಂತಿಃ

ಶ್ರೀ ಗುರುಭ್ಯೋ ನಮಃ ಹರಿಃ ಓಮ್ ಎಂದೇ ಪ್ರಾರಂಭಿಸುವ ಪರಿಪಾಠ. ಉಪನಿಷತ್ತನ್ನು ಉಚ್ಚರಿಸುವ ಪ್ರಾರಂಭದಲ್ಲಿ ಹೀಗೆ ಹೇಳಲೇಬೇಕು. ಹರಿಗಿಂತ ಗುರುವೇ ಪ್ರಧಾನ. ಆ ಹರಿಯನ್ನು ತೋರಿಸುವವನಲ್ಲವೇ ಗುರು. ಆದ್ದರಿಂದ ಗುರುವಿಗೆ ನಮಸ್ಕರಿಸಿ ಹರಿಯನ್ನು ಸ್ಮರಿಸಬೇಕು. "ಸ್ಮರಣಮಾತ್ರೇ ನಪುಂಸಾಂ ಪಾಪಂ ಹರತಿ ಇತಿ ಹರಿಃ" ಸ್ಮರಣ ಮಾತ್ರದಿಂದಲೇ ಪಾಪವನ್ನು ಹೋಗಲಾಡಿಸುವವನು ಹರಿ. ಆ ಹರಿಯೇ ಓಂಕಾರ ಸ್ವರೂಪಿ ಆದ್ದರಿಂದಲೇ ಹರಿಃ ಓಮ್ ಎಂದು ಸ್ಮರಿಸಿ ಶಂ ನೋ ಮಿತ್ರಃ ಶಂ ವರುಣಃ ಎಂದು ಪ್ರಾರಂಭ. ಮಿತ್ರಃ ಎಂದರೆ ಪ್ರಾಣಕ್ಕೂ ಹಗಲಿಗೂ ಅಭಿಮಾನಿ ದೇವತೆಯಾದ ಸೂರ್ಯ, ನಹಃ ಎಂದರೆ ನಮಗೆ, ಶಂ ಎಂದರೆ ಶುಭವನ್ನು ಉಂಟುಮಾಡಲಿ. 'ಶಂ ನೋ ಭವತ್ವರ್ಯಮಾ' ಎಂದರೆ ಆರ್ಯಮನು ನಮಗೆ ಶುಭವನ್ನುಂಟುಮಾಡಲಿ. 'ಶಂ ನ ಇಂದ್ರೋ ಬೃಹಸ್ಪತಿಃ' ಎಂದರೆ, ಇಂದ್ರನು ನಮಗೆ ಶುಭವನ್ನುಂಟು ಮಾಡಲಿ. ಬೃಹಸ್ಪತಿಯು ನಮಗೆ ಶುಭವನ್ನುಂಟು ಮಾಡಲಿ. ಶಂ ನೋ ವಿಷ್ಣುರುರುಕ್ರಮಃ ಎಂದರೆ, ಉರುಕ್ರಮನಾದ ವಿಷ್ಣುವು ನಮಗೆ ಶುಭವನ್ನುಂಟು ಮಾಡಲಿ ನಮೋ ಬ್ರಹ್ಮಣೇ - ಬ್ರಹ್ಮನಿಗೆ ನಮಸ್ಕಾರ, ನಮಸ್ತೇ ವಾಯೋ - ವಾಯುವೇ ನಿನಗೆ ನಮಸ್ಕಾರ. ತ್ವಮೇವ ಪ್ರತ್ಯಕ್ಷಂ ಬ್ರಹ್ಮಾಸಿ - ಹೇ ವಾಯು ನೀನೇ ಪ್ರತ್ಯಕ್ಷ ಬ್ರಹ್ಮ ತ್ವಾಮೇವ ಪ್ರತ್ಯಕ್ಷಂ ಬ್ರಹ್ಮವದಿಷ್ಯಾಮಿ ನಾನು, ನೀನೇ ಪ್ರತ್ಯಕ್ಷ ಬ್ರಹ್ಮನೆಂದು ಹೇಳುತ್ತೇನೆ. ಋತಂ ವದಿಷ್ಯಾಮಿ ನಿನ್ನನ್ನೇ ಋತ ಎಂದು ಹೇಳುತ್ತೇನೆ. ಸತ್ಯಂ ವದಿಷ್ಯಾಮಿ - ನಿನ್ನನ್ನೇ ಸತ್ಯ

ವೆಂದು ಹೇಳುತ್ತೇನೆ. ತನ್ಮಾಮವತು - ಅದು ನನ್ನನ್ನು ಕಾಪಾಡಲಿ. ತದ್ವಕ್ತಾರಮವತು - ಅದು ಆಚಾರ್ಯನನ್ನು ಕಾಪಾಡಲಿ. ಓಂ ಶಾಂತಿಃ ಶಾಂತಿಃ ಶಾಂತಿಃ - ಶಾಂತಿಯಾಗಲಿ, ಶಾಂತಿಯಾಗಲಿ ಈ ಪ್ರಾರ್ಥನೆಯಲ್ಲಿ ಹಲವಾರು ದೇವತೆಗಳನ್ನು ಪ್ರಾರ್ಥಿಸಿಕೊಳ್ಳಲಾಗಿದೆ. ಉಪನಿಷತ್ತು ಪರಬ್ರಹ್ಮವನ್ನು ತಿಳಿಸಿಕೊಡುವ ಬ್ರಹ್ಮವಿದ್ಯೆ. ಆದ್ದರಿಂದ ಆ ಪರಬ್ರಹ್ಮವಸ್ತುವನ್ನೇ ಪ್ರಾರ್ಥಿಸಿಕೊಳ್ಳಬಹುದಾಗಿತ್ತಲ್ಲ ಎಂದು ಕೇಳಿದರೆ, ಇಲ್ಲಿ ಪ್ರಾರ್ಥಿಸಿಕೊಳ್ಳಲಾದ ದೇವತೆಗಳೆಲ್ಲ ಪರಬ್ರಹ್ಮನ ಪ್ರತಿನಿಧಿಗಳೇ. ಈ ದೇವತೆಗಳಲ್ಲಿ ಯಾವಯಾವ ಶಕ್ತಿಗಳಿವೆಯೋ ಅವೆಲ್ಲ ಪರಬ್ರಹ್ಮನಿಂದ ಪ್ರಾಪ್ತವಾದ ಶಕ್ತಿಗಳೇ. ಈ ಎಲ್ಲ ದೇವತೆಗಳ ಹಿನ್ನೆಲೆಯಲ್ಲೂ ಕೂಡ ಅದೇ ಪರಬ್ರಹ್ಮಶಕ್ತಿಯೇ ಇದೆ. ಇನ್ನೊಂದು ಮಾತಿನಲ್ಲಿ ಹೇಳುವುದಾದರೆ, ಆ ಒಂದೇ ಪರಬ್ರಹ್ಮವಸ್ತುವೇ ನಾನಾ ಕಾರ್ಯಗಳನ್ನು ನಿರ್ವಹಿಸುವುದಕ್ಕಾಗಿ ನಾನಾ ಬಗೆಯಾಗಿ ವ್ಯಕ್ತವಾಗಿದೆ ಅಷ್ಟೆ. ಮನುಷ್ಯ ಒಬ್ಬನೇ ಆದರೂ ಅವನ ನಾನಾ ಅಂಗಗಳು ಮಾಡುವ ಕಾರ್ಯಗಳೆಲ್ಲ ಬೇರೆ ಬೇರೆ. ಕಾಲುಗಳು ಮಾಡುವ ಕೆಲಸಗಳನ್ನು ಕೈಗಳು ಮಾಡುವುದಿಲ್ಲ, ಕಿವಿಗಳು ಮಾಡುವ ಕೆಲಸಗಳನ್ನು ಕಣ್ಣುಗಳು ಮಾಡುವುದಿಲ್ಲ. ಆದರೆ ಪ್ರತಿಯೊಂದು ತಮ್ಮ ತಮ್ಮ ಕೆಲಸಗಳನ್ನು ಯಶಸ್ವಿಯಾಗಿ ಮಾಡುತ್ತವೆ. ಆದರೆ ಈ ಎಲ್ಲ ಹಿನ್ನೆಲೆಯಲ್ಲಿಯೂ ಮನುಷ್ಯ ಇದ್ದಾನೆ. ಮನುಷ್ಯನ ಕೈ ನಮಗೆ ಒಂದು ಮಾವಿನ ಹಣ್ಣನ್ನು ಕೊಟ್ಟರೂ ಕೂಡ, ನಿಜಕ್ಕೂ ಅದನ್ನು ಕೊಟ್ಟವನು ಕೈಯ ಯಜಮಾನನಾದ ಮನುಷ್ಯನೇ ಹೊರತು ಕೈಯಲ್ಲ. ಇಲ್ಲಿ ನಾನಾ ದೇವತೆಗಳು ನಮಗೆ ಒಂದೊಂದು ಅನುಗ್ರಹ ಮಾಡಿದರೂ ಕೂಡ ನಿಜವಾಗಿ ಅನುಗ್ರಹ ಬಂದಿರುವುದು ಆ ಪರಬ್ರಹ್ಮವಸ್ತುವಿನಿಂದಲೇ.

ಆದ್ದರಿಂದ ಇಲ್ಲಿ ಪರಬ್ರಹ್ಮವಸ್ತು ಅವನನ್ನೇ ನೇರವಾಗಿ ಪ್ರಾರ್ಥಿಸಿಕೊಳ್ಳುವುದರ ಬದಲು ಅವನ ಪ್ರತಿನಿಧಿಗಳಾದ ಇತರೆ ದೇವತೆಗಳನ್ನು ಪ್ರಾರ್ಥಿಸಿಕೊಳ್ಳಲಾಗಿದೆ. ಮನುಷ್ಯನ ಅಂಗವಾದ ಕೈ ಸ್ವತಂತ್ರವಾಗಿ ಮಾವಿನ ಹಣ್ಣನ್ನು ಕೊಡದೆ ಇರಬಹುದು. ಆದರೆ ಇಲ್ಲಿ ಈ ದೇವತೆಗಳು ಚೈತನ್ಯಸ್ವರೂಪಿಗಳು. ಆದ್ದರಿಂದ ಸ್ವತಂತ್ರವಾಗಿ ನಮಗೆ ಅನುಗ್ರಹ ಮಾಡಬಲ್ಲರು. ಆದ್ದರಿಂದಲೇ ಈ ದೇವತೆಗಳನ್ನು ಪ್ರಾರ್ಥಿಸಿಕೊಳ್ಳಲಾಗಿದೆ. ಈ ಸ್ತುತಿಯಲ್ಲಿ ಬಂದಿರುವ ಮಿತ್ರ, ವರುಣ, ಅರ್ಯಮ ಹಾಗೂ ವಿಷ್ಣು ಇವರು ದ್ವಾದಶ ಆದಿತ್ಯರಲ್ಲಿ ಪ್ರಮುಖರು. ಆದಿತ್ಯ ಎಂದರೆ ಸೂರ್ಯ. ಅಖಂಡ ವಿಶ್ವದಲ್ಲಿ ೧೨ ಆದಿತ್ಯರು ಬೆಳಗುತ್ತಿದ್ದಾರೆ. ಪ್ರಳಯ ಕಾಲದಲ್ಲಿ ಅವರೆಲ್ಲ ಒಟ್ಟಾಗಿ ಬೆಳಗುತ್ತಾರೆ. ನಾವು ಸುಟ್ಟುಹೋಗುತ್ತೇವೆ. ಈಗ ಒಬ್ಬೊಬ್ಬನೇ ಇಷ್ಟರ ಮಟ್ಟಿಗೆ ನಮ್ಮನ್ನು ಸುಡುವುದಕ್ಕೆ ಸಮರ್ಥನಾಗಿದ್ದಾನೆ. ಮಿತ್ರ ಎನ್ನುವ ಆದಿತ್ಯ ನಮ್ಮ ಉಚ್ಛ್ವಾಸ ಹಾಗೂ ಹಗಲಿಗೆ ಪ್ರತಿನಿಧಿ. ಈ ಮಿತ್ರ ಎನ್ನುವನು ನಮ್ಮನ್ನು ಚಟುವಟಿಕೆಯಿಂದಿಡುವವನು. ಈ ಭೂಮಿಯನ್ನು ಕಾಪಾಡುವವನು. ಹಾಗೂ ಸಕಲ ಜೀವರನ್ನು ಕಣ್ಣಿವೆ ಇಕ್ಕದೆ ರಕ್ಷಿಸುವವನು. ಅಂತಹ ಮಿತ್ರನು ನಮ್ಮ ಪ್ರಾಣಶಕ್ತಿಯನ್ನು ಕಾಪಾಡಲಿ ಎಂದು ಪ್ರಾರ್ಥನೆ. ವರುಣ ಎನ್ನುವವನು ರಾತ್ರಿಯಾಗಿಸುವುದಕ್ಕೆ ಹಾಗೂ ನಮ್ಮ ನಿಃಶ್ವಾಸಕ್ಕೆ ಕಾರಣ ಹಾಗೂ ಇವುಗಳಿಗೆ ಅಧಿದೇವತೆ. ಇವನ ಶಕ್ತಿಯೂ ಕೂಡ ಅಪಾರವಾದದ್ದು. ದೇವತೆಗಳಲ್ಲಿ ಇವನಿಗೆ ಪ್ರಧಾನ ಸ್ಥಾನವಿದೆ. ಇವನ ಮಹಿಮೆಯನ್ನು ವರ್ಣಿಸುವಂತಹ ಹಲವಾರು ಸ್ತೋತ್ರಗಳಿವೆ. ಇವನು ಸಾಗರಗಳ ಅಧಿಪತಿ, ಸ್ವರ್ಗ ಮರ್ತ್ಯಗಳನ್ನು ರಕ್ಷಿಸುವವನು. ಇವನು ಮಹಾಜ್ಞಾನಿ ಹಾಗೂ ಅಪರಿಮಿತ ಪರಾಕ್ರಮಿ. ಸುಳ್ಳು ಹೇಳುವವರನ್ನು ತಿರಸ್ಕರಿಸುತ್ತಾನೆ. ನೀತಿ ನಿಯಮಗಳನ್ನು ಮುರಿಯುವವರನ್ನು ತನ್ನ ಪಾಶದಿಂದ ಬಿಗಿಯುತ್ತಾನೆ. ಶರಣಾದವರ ಪಾಪಗಳನ್ನು ಕ್ಷಮಿಸುತ್ತಾನೆ. ಅಮರತ್ವವನ್ನು ಕೊಡಬಲ್ಲವನಾಗಿದ್ದಾನೆ. ಇಂತಹ ವರುಣನು ನಮಗೆ ಶುಭವನ್ನುಂಟುಮಾಡಲಿ ಎಂದು ಪ್ರಾರ್ಥನೆ. ಅರ್ಯಮ ಎಂಬುವನು ಸೂರ್ಯ ಹಾಗೂ ನಮ್ಮ ಕಣ್ಣುಗಳಿಗೆ ಅಧಿದೇವತೆ ಹಾಗೂ ಪಿತೃಗಳಿಗೂ ಇವನು ದೇವತೆ. ನಮ್ಮ ಕಣ್ಣುಗಳು ತೇಜಸ್ವಿಯಾಗಿ ಸಶಕ್ತವಾಗಿರಲಿ ಎಂದು ಇವನನ್ನು ಪ್ರಾರ್ಥಿಸಿಕೊಳ್ಳಲಾಗಿದೆ. ಇಂದ್ರ ನಮಗೆಲ್ಲ ಚಿರಪರಿಚಿತ. ವೇದದಲ್ಲಿ ಇವನನ್ನು ವಿಶೇಷವಾಗಿ ಸ್ತುತಿಸಲಾಗಿದೆ. ಇವನ ಆಯುಧವೇ ವಜ್ರಾಯುಧ. ವಜ್ರ ಶಕ್ತಿಯ ಸಂಕೇತ. ನಮ್ಮ ಶರೀರದ ಅಧಿದೇವತೆ ಇವನೇ. ಅದರಲ್ಲೂ ಮುಖ್ಯವಾಗಿ ನಮ್ಮ ಕೈಗಳ ಅಧಿದೇವತೆ ಇವನು. ಪರಬ್ರಹ್ಮನ ಇನ್ನೊಂದು ವಿಶೇಷ ಆವಿರ್ಭಾವವೇ ಬೃಹಸ್ಪತಿ. ಬೃಹಸ್ಪತಿ ವಿದ್ಯೆ ಹಾಗೂ ಬುದ್ಧಿಗೆ ಅಧಿದೇವತೆ, ಮನುಷ್ಯ ಶ್ರೇಷ್ಠ ತಾತ್ವಿಕನಾಗಬೇಕಾದರೆ, ಸಾಹಿತಿಯಾಗಬೇಕಾದರೆ, ವಾಗ್ಮಿಯಾಗಬೇಕಾದರೆ ಈ ಬೃಹಸ್ಪತಿ ಅನುಗ್ರಹ ಬೇಕು. ಆದ್ದರಿಂದ ನಮ್ಮ ಬುದ್ಧಿಶಕ್ತಿಯನ್ನು ವಾಕ್ ಶಕ್ತಿಯನ್ನು ಪ್ರಚೋದಿಸುವ ಹಾಗೆ ಇವನನ್ನು ಪ್ರಾರ್ಥಿಸಿಕೊಳ್ಳಲಾಗಿದೆ. ಉರುಕ್ರಮನೇ ತ್ರಿವಿಕ್ರಮ. ಇವನೇ ವಿಷ್ಣು. ವಿಷ್ಣು ಸರ್ವವ್ಯಾಪಿ. ಇವನು ೩ ಲೋಕಗಳನ್ನೂ ತನ್ನ ಪಾದಗಳಿಂದ ಅಳೆದು ಸ್ವಾಧೀನಪಡಿಸಿಕೊಂಡವನು. ಅಗ್ನಿ, ವಿದ್ಯುತ್ ಹಾಗೂ ಸೂರ್ಯ ಇವರಿಗೆ ವಿಷ್ಣು ಅಧಿದೇವತೆ. ದ್ವಾದಶ ಆದಿತ್ಯರಲ್ಲಿ ಇವನೇ ಅಗ್ರಗಣ್ಯ. ಆದ್ದರಿಂದಲೇ ಶ್ರೀಕೃಷ್ಣ ಹೇಳುತ್ತಾನೆ "ಆದಿತ್ಯಾನಾಂ ಅಹಂ ವಿಷ್ಣುಃ" ಅಂತ. ನಮ್ಮ ಕಾಲುಗಳ ಶಕ್ತಿಗೆ ವಿಷ್ಣುವೇ ಅಧಿದೇವತೆ. ಇಂತಹ ಸರ್ವವ್ಯಾಪಿ ವಿಷ್ಣು ನಮಗೆ ಶುಭವನ್ನುಂಟುಮಾಡಲಿ ಎಂದು ಪ್ರಾರ್ಥಿಸಲಾಗಿದೆ. ಈ ದೇವತೆಗಳೆಲ್ಲ ಕೇವಲ ಸ್ವರ್ಗದಲ್ಲೇ ಇದ್ದು ಆಳುವವರಲ್ಲ ಇವರೆಲ್ಲ ನಮ್ಮ ನಮ್ಮ ಶರೀರ ಮನಸ್ಸುಗಳಲ್ಲಿದ್ದುಕೊಂಡು ನಮ್ಮ ವ್ಯಕ್ತಿತ್ವಕ್ಕೆ ಕಾರಣರಾಗಿದ್ದಾರೆ, ಎಂಬುದನ್ನು ಋಷಿಗಳು ಕಂಡುಕೊಂಡಿದ್ದಾರೆ. ಆದ್ದರಿಂದಲೇ ಈ ದೇವತೆಗಳೆಲ್ಲ ನಮ್ಮ ಶರೀರ ಬುದ್ಧಿಗಳನ್ನು ಬಲಪಡಿಸುವುದರ ಮೂಲಕ ಶುಭವನ್ನುಂಟುಮಾಡಲಿ ಎಂದು ಪ್ರಾರ್ಥಿಸಿಕೊಳ್ಳಲಾಗಿದೆ. ಅದರಲ್ಲೂ ಈ ಶ್ಲೋಕದಲ್ಲಿ ವಾಯುವನ್ನು ವಿಶೇಷವಾಗಿ ಕೊಂಡಾಡಿ ಬೇಡಿಕೊಂಡಿರುವ ಹಾಗೆ ಕಂಡುಬರುತ್ತದೆ. ನಮೋ ಬ್ರಹ್ಮಣೇ ನಮಸ್ತೇ ವಾಯೋ ತ್ವಮೇವ ಪ್ರತ್ಯಕ್ಷಂ ಬ್ರಹ್ಮಾಸಿ ತ್ವಾಮೇವ ಪ್ರತ್ಯಕ್ಷಂ ಬ್ರಹ್ಮವದಿಷ್ಯಾಮಿ ಹೇ ವಾಯು ನಿನಗೆ ನಮಸ್ಕಾರ. ನೀನೇ ಪ್ರತ್ಯಕ್ಷ ಬ್ರಹ್ಮನಾಗಿದ್ದೀಯ, ನೀನೇ ಪ್ರತ್ಯಕ್ಷ ಬ್ರಹ್ಮನಾಗಿದ್ದೀಯ ಎಂದು ನಾನು ಹೇಳುತ್ತಿದ್ದೇನೆ. ಎಂದು ಹೇಳಿದ್ದೂ ಅಲ್ಲದೆ ಋತಂ ವದಿಷ್ಯಾಮಿ ಸತ್ಯಂ ವದಿಷ್ಯಾಮಿ ಎಂದರೆ, ನೀನೇ ಪ್ರತ್ಯಕ್ಷಬ್ರಹ್ಮ ಅಂತ ಹೇಳುವಂತದ್ದು ಋತವಾದದ್ದು ಎಂದು ಹೇಳುತ್ತೇನೆ. ಸತ್ಯವಾದದ್ದು ಎಂದು ಹೇಳುತ್ತೇನೆ. ಹೀಗೆ ವಾಯುವನ್ನು ವಿಶೇಷವಾಗಿ ಕೊಂಡಾಡಲಾಗಿದೆ. ಋತ ಎಂದರೆ ಶಾಸ್ತ್ರದಲ್ಲಿ ಏನೇನು ಹೇಳಿದೆಯೋ ಅದನ್ನು ಬುದ್ಧಿಯಿಂದ ಅರ್ಥಮಾಡಿಕೊಂಡು ಒಂದು ನಿಶ್ಚಯಕ್ಕೆ ಬರುವುದು. ಸತ್ಯ ಎಂದರೆ ಮಾತು, ಕೃತಿಗಳಲ್ಲಿ ವ್ಯಕ್ತವಾಗುವಂತಾದ್ದು ಶಾಸ್ತ್ರಗಳಲ್ಲಿ ಅರ್ಥಮಾಡಿಕೊಂಡಿದ್ದನ್ನೇ ಮಾತಿನಲ್ಲಿ ಯಥಾರ್ಥವಾಗಿ ಉಪಯೋಗಿಸುವಂತದ್ದು. ಯಾವುದು ನಿಷ್ಠೆಯಿಂದ ನಡೆದುಕೊಂಡು ಬರುತ್ತದೆಯೋ ಅದೆಲ್ಲ ಋತ. ಸೂರ್ಯೋದಯ, ಸೂರ್ಯಾಸ್ತಮಾನ, ಋತುಮಾನಗಳು ಇವುಗಳೆಲ್ಲ ಎಂತಹ ನಿಷ್ಠೆಯಿಂದ ನಡೆದುಕೊಂಡು ಬರುತ್ತಿವೆ. ಇದ್ದುದ್ದನ್ನು ಇದ್ದ ಹಾಗೇ ಹೇಳುವುದೇ ಸತ್ಯ. ಸತ್ಯವೇ ಭಗವಂತನಿಗೆ ಅತ್ಯಂತ ಪ್ರೀತಿ. ಏಕೆಂದರೆ ಆ ಸತ್ಯವೇ ಅವನು. ಸತ್ಯವನ್ನು ಹೇಳಿದಾಗ ಅವನನ್ನು ಅನುಸಂಧಾನ ಮಾಡಿದಂತಾಗುತ್ತದೆ. ಅವನನ್ನೇ ಸ್ತುತಿಸಿದಂತೆ, ಅವನಿಗೆ ಮನ್ನಣೆ ಕೊಟ್ಟಂತೆ. ಆದ್ದರಿಂದ ಋತಂ ವದಿಷ್ಯಾಮಿ, ಸತ್ಯಂ ವದಿಷ್ಯಾಮಿ. ಅದನ್ನೇ ಇಲ್ಲಿ ವಾಯುವನ್ನು ಕೊಂಡಾಡುವಾಗ ಪ್ರತ್ಯಕ್ಷ ಬ್ರಹ್ಮ ಎನ್ನುವಂತಾದ್ದನ್ನು ಋತವಾದದ್ದು ಅಂತ ಹೇಳುತ್ತೇನೆ. ನೀನೇ ಪ್ರತ್ಯಕ್ಷ ಬ್ರಹ್ಮ ಎಂದು ಹೇಳುವುದು ಸತ್ಯವಾದದ್ದು ಎಂದು ಹೇಳುತ್ತೇನೆ. ಎಂದು ಹೇಳಿ, ತನ್ಮಾಮವತು, ತದ್ವಕ್ತಾರಮವತು, ಅವತು ವಕ್ತಾರಮ್ ಎಂದು ಪ್ರಾರ್ಥಿಸಿಕೊಳ್ಳಲಾ

ಗಿದೆ. ಎಂದರೆ, ಈ ರೀತಿ ವಾಯುಸ್ವರೂಪಿಯಾಗಿಯೂ, ಋತ ಮತ್ತು ಸತ್ಯಸ್ವರೂಪಿಯಾಗಿಯೂ ಇರುವಂತಹ ಬ್ರಹ್ಮವು ನನ್ನನ್ನು ಕಾಪಾಡಲಿ ಮತ್ತು ಆಚಾರ್ಯನನ್ನು ಕಾಪಾಡಲಿ ಎಂದು. ಇಲ್ಲಿ ಈ ಬ್ರಹ್ಮವಿದ್ಯೆಯನ್ನು ಪ್ರವಚನ ಅಧ್ಯಯನ ಮಾಡುವ ಸಂದರ್ಭದಲ್ಲಿ ಹಲವಾರು ದೇವತೆಗಳನ್ನು ಪ್ರಾರ್ಥಿಸಿಕೊಂಡಿದ್ದರ ವೈಶಿಷ್ಟ್ಯವನ್ನು ನಾವು ಸ್ವಲ್ಪ ಗಮನಿಸಬೇಕು. ಏನೆಂದರೆ, ಮೊದಲನೆಯದಾಗಿ ಅಧ್ಯಯನ ಮಾಡುವಂತಹ ಶಿಷ್ಯನ ಶರೀರ ಹಾಗೂ ಅಂಗಪ್ರತ್ಯಂಗಗಳು ದೃಢವಾಗಿ, ಆರೋಗ್ಯ ಶಾಲಿಯಾಗಿ ಇರಬೇಕಾಗುತ್ತದೆ. ಬುದ್ಧಿಯಲ್ಲಿ ತೀಕ್ಷ್ಣತೆ ಇರಬೇಕಾಗುತ್ತದೆ. ಆದ್ದರಿಂದಲೇ ಇವುಗಳ ತುಷ್ಟಿ, ಪುಷ್ಟಿಗಾಗಿ ಸಂಬಂಧಪಟ್ಟ ದೇವತೆಗಳ ಅನುಗ್ರಹಕ್ಕಾಗಿ ಪ್ರಾರ್ಥಿಸಿಕೊಳ್ಳಲಾಗಿದೆ. ಅಲ್ಲದೆ ಉದ್ದೇಶ ಸಿದ್ಧಿಯಾಗಬೇಕಾದರೆ ಮೊದಲೇ ಗುರುಶಿಷ್ಯರಲ್ಲಿ ಯಾರೊಬ್ಬರೂ ಅಕಾಲ ಮರಣಕ್ಕೂ ಗುರಿಯಾಗಬಾರದು, ಅಪಘಾತಕ್ಕೂ ಗುರಿಯಾಗಬಾರದು ಎಂದು ಹೇಳುವ ದೃಷ್ಟಿಯಿಂದ ಶಿಷ್ಯ ಪ್ರಾರ್ಥಿಸಿಕೊಳ್ಳುತ್ತಾನೆ ಅವತು ಮಾಮ್, ಅವತುವಕ್ತಾರಮ್, ನನ್ನನ್ನು ಕಾಪಾಡಲಿ, ಆಚಾರ್ಯನನ್ನು ಕಾಪಾಡಲಿ - ಮಧ್ಯದಲ್ಲಿ ಯಾರಿಗೂ ಅವಗಡ ಉಂಟಾಗದಿರಲಿ ಎಂದು. ಆಲೋಚನೆಮಾಡಿ ನೋಡಬೇಕು. ಒಂದು ಕಾರ್ಯ ನಿರಂತರವಾಗಿ ನಡೆದು ಮುಗಿಯುವವರೆಗೂ ಇಬ್ಬರೂ ಉಳಿದುಕೊಳ್ಳಬೇಕು. ಎರಡನೆಯದಾಗಿ, ಹೀಗೆ ದೇವತೆಗಳನ್ನು ಪ್ರಾರ್ಥಿಸಿಕೊಂಡದ್ದರಲ್ಲಿ ಇನ್ನೊಂದು ಉದ್ದೇಶವೇನು ಎಂದರೆ, ಆತ್ಮ ಸಾಕ್ಷಾತ್ಕಾರಕ್ಕಾಗಿ ಪ್ರಯತ್ನ ಮಾಡುವವನಿಗೆ ದೇವತೆಗಳು, ಪಿತೃಗಳು ಅಡ್ಡಿಪಡಿಸುತ್ತಾರೆ ಎನ್ನುವ ಒಂದು ನಂಬಿಕೆ ಇದೆ. ಅವನ ತಪಸ್ಸನ್ನು ಭಂಗಪಡಿಸಲು ಯತ್ನಿಸುತ್ತಾರೆ ಎನ್ನುವ ನಂಬಿಕೆ ಇದೆ. ಮಹಾಭಾರತ ಹೇಳುತ್ತದೆ, ಮನುಷ್ಯರು ತಮ್ಮನ್ನು ಮೀರಿ ಹೋಗುವಂತಾಗುವುದನ್ನು ದೇವತೆಗಳು ಇಷ್ಟಪಡುವುದಿಲ್ಲ ಎಂದು. ಏಕೆ? ಏಕೆ ಎನ್ನುವ ಪ್ರಶ್ನೆಗೆ ಬೃಹದಾರಣ್ಯಕ ಉಪನಿಷತ್ತು ಹೇಳುತ್ತದೆ. ಆತ್ಮಸಾಕ್ಷಾತ್ಕಾರ ಮಾಡಿಕೊಳ್ಳದಂತಹ ಮನುಷ್ಯರೆಲ್ಲ ದೇವತೆಗಳ ಪಾಲಿಗೆ ಆಡು, ಕುರಿಗಳಂತಹ ಬಲಿಪಶುಗಳಿದ್ದಂತೆ, ಏಕೆಂದರೆ ಈ ಮನುಷ್ಯರು ದಾಸಾನುದಾಸರಾಗಿ ದೇವತೆಗಳಿಗೆ ಪೂಜೆ ಮಾಡಿ ಹವಿರ್ಭಾಗಗಳನ್ನು ಕೊಡುತ್ತಾರೆ. ಅವರ ವಿಲಾಸಕ್ಕೆ ಅನುಕೂಲಮಾಡಿಕೊಡುತ್ತಾರೆ ಎಂದು ಗೊಲ್ಲರು ತಮ್ಮ ಹಸುಗಳನ್ನು ಹುಲಿ ಬಂದು ಎತ್ತಿಕೊಂಡು ಹೋಗದ ಹಾಗೆ ಸದಾ ರಕ್ಷಣೆಮಾಡುವಂತೆ ಈ ಮನುಷ್ಯರು ಬ್ರಹ್ಮಜ್ಞಾನ ಮಾಡಿಕೊಂಡು ತಮ್ಮ ಕೈಯಿಂದ ತಪ್ಪಿಸಿಕೊಂಡು ಹೋಗದ ಹಾಗೆ ದೇವತೆಗಳು ಮನುಷ್ಯರನ್ನು ತಮ್ಮ ಹಿಡಿತದಲ್ಲಿಟ್ಟುಕೊಂಡಿರುತ್ತಾರೆ. ಆದರೆ ಈ ದೇವತೆಗಳು ಯಾರನ್ನು ಮುಕ್ತರನ್ನಾಗಿ ಮಾಡಬೇಕು ಅಂತ ಇಷ್ಟಪಡುತ್ತಾರೋ ಅವರಿಗೆ ಶ್ರದ್ಧೆಯನ್ನು ಕೊಡುತ್ತಾರೆ. ಅವರ ಆಧ್ಯಾತ್ಮಿಕ ಸಾಧನೆಗಳಿಗೆ ಬೇಕಾದ ಇತರ ಯೋಗ್ಯತೆಗಳನ್ನು ಕೊಡುತ್ತಾರೆ. ಆದರೆ ಯಾರನ್ನು ತಮ್ಮ ಹಿಡಿತದಲ್ಲಿಟ್ಟುಕೊಳ್ಳಬೇಕು ಅಂದುಕೊಂಡಿರುತ್ತಾರೋ ಅಂತಹವರಿಗೆ ಮಂಕು ಕವಿಸುತ್ತಾರೆ. ನಾಸ್ತಿಕತೆ ಕವಿಯುವ ಹಾಗೆ ಮಾಡುತ್ತಾರೆ. ಭೋಗಗಳನ್ನು ತಂದು ಒಡ್ಡಿಬಿಡುತ್ತಾರೆ. ಆದ್ದರಿಂದ ಮುಕ್ತಿಯನ್ನು ಪಡೆಯಬೇಕು ಎಂದು ಬಯಸುವವನು, ಆತ್ಮಜ್ಞಾನವನ್ನು ಪಡೆಯಬೇಕು ಎಂದು ಬಯಸುವವನು ದೇವತೆಗಳನ್ನು ಶ್ರದ್ಧಾಭಕ್ತಿಯಿಂದ ಪ್ರಾರ್ಥಿಸಿಕೊಂಡು ಅವರ ಕೃಪೆಯನ್ನು ಪಡೆಯಬೇಕಾಗುತ್ತದೆ. ಆಗಲೆ, ನಿನಗೆ ಒಳ್ಳೆಯದಾಗಲಿ ಅಂತ ಅವರು ಹೇಳಬೇಕು. ಆದ್ದರಿಂದ ಶಿಷ್ಯನಾದವನು ದೇವತೆಗಳನ್ನು ಇಲ್ಲಿ ಪ್ರಾರ್ಥಿಸಿಕೊಳ್ಳುತ್ತಿದ್ದಾನೆ.

ಓಂ ಶಂ ನೋ ಮಿತ್ರಃ ಶಂ ವರುಣಃ
ಶಂ ನೋ ಭವತ್ವರ್ಯಮಾ
ಶಂ ನ ಇಂದ್ರೋ ಬೃಹಸ್ಪತಿಃ
ಶಂ ನೋ ವಿಷ್ಣುರುರುಕ್ರಮಃ
ನಮೋ ಬ್ರಹ್ಮಣೇ ನಮಸ್ತೇ ವಾಯೋ
ತ್ವಮೇವ ಪ್ರತ್ಯಕ್ಷಂ ಬ್ರಹ್ಮಾಸಿ
ತ್ವಾಮೇವ ಪ್ರತ್ಯಕ್ಷಂ ಬ್ರಹ್ಮವದಿಷ್ಯಾಮಿ
ಋತಂ ವದಿಷ್ಯಾಮಿ ಸತ್ಯಂ ವದಿಷ್ಯಾಮಿ
ತನ್ಮಾಮವತು ತದ್ವಕ್ತಾರಮವತು
ಅವತು ಮಾಮ್ ಅವತು ವಕ್ತಾರಮ್
ಓಂ ಶಾಂತಿಃ ಶಾಂತಿಃ ಶಾಂತಿಃ

ಹರಿಃ ಓಮ್

ಇಲ್ಲಿ ಶಾಂತಿ ಎಂಬ ಮಂತ್ರವನ್ನು ೩ ಸಾರಿ ಏಕೆ ಉಚ್ಚರಿಸಬೇಕು. ಒಂದೇ ಸಾರಿ ಉಚ್ಚರಿಸಿದರೆ ಸಾಲದೇ ಎಂಬ ಪ್ರಶ್ನೆ ಬರುತ್ತದೆ. ಏಕೆಂದರೆ ನಾವು ಯಾವಾಗಲೂ ಮೂರು ವಿಷಯಗಳಲ್ಲಿ ಅಶಾಂತಿಗೆ ಗುರಿಯಾಗುವ ಸಂಭವವಿರುತ್ತದೆ. ಅವು ಯಾವುವೆಂದರೆ, ಆಧ್ಯಾತ್ಮಿಕ, ಆದಿಭೌತಿಕ, ಆದಿದೈವಿಕ. ಇವುಗಳನ್ನೇ ತಾಪತ್ರಯ ಎಂದು ಕರೆಯುವುದು. ಆಧ್ಯಾತ್ಮಿಕ ದುಃಖ ಎಂದರೆ ಶರೀರ ಮನಸ್ಸುಗಳಲ್ಲಿ ಉತ್ಪನ್ನವಾಗುವ ದುಃಖ. ಇಲ್ಲಿ ಆಧ್ಯಾತ್ಮಿಕ ಎಂದರೆ ದೇಹ ಮನಸ್ಸಿಗೆ ಸಂಬಂಧಪಟ್ಟಿದ್ದು ಎಂದು ಅರ್ಥಮಾಡಿಕೊಳ್ಳಬೇಕು. ಆದಿಭೌತಿಕ ಎಂದರೆ ಮೃಗಪಕ್ಷಿಗಳಿಂದ, ಅಥವಾ ಸೊಳ್ಳೆ ತಿಗಣೆಗಳಿಂದ ಬರಬಹುದಾದ ಕಷ್ಟಗಳು. ಆದಿದೈವಿಕ ಎಂದರೆ ಅತಿವೃಷ್ಟಿ, ಅನಾವೃಷ್ಟಿ, ಕ್ಷಾಮಡಾಮರ ಇವೆಲ್ಲ ಆದಿದೈವಿಕ ತೊಂದರೆಗಳು. ಎಂತಹ ಋಷಿಮುನಿಗಳಿಗೂ ಈ ಆದಿದೈವಿಕ ಕಷ್ಟಗಳು ತಪ್ಪಿದ್ದಲ್ಲ. ಈ ಮೂರೂ ಬಗೆಯ ದುಃಖಗಳಿಂದ ಪಾರಾಗುವಂತೆ ಭಗವಂತನನ್ನು ಪ್ರಾರ್ಥಿಸಿಕೊಳ್ಳಲಾಗುತ್ತದೆ ಓಂ ಶಾಂತಿಃ ಶಾಂತಿಃ ಶಾಂತಿಃ ಎಂದು, ಹೀಗೆ ಶಿಷ್ಯನಾದವನು ದೇವತೆಗಳನ್ನು ಪ್ರಾರ್ಥಿಸಿಕೊಂಡ ಮೇಲೆ ಆಚಾರ್ಯನಾದವನು ಪ್ರವಚನವನ್ನು ಪ್ರಾರಂಭಿಸುತ್ತಾನೆ.

ಓಂ ಶಿಕ್ಷಾಂ ವ್ಯಾಖ್ಯಾಸ್ಯಾಮಃ
ವರ್ಣಃ ಸ್ವರಃ ಮಾತ್ರಾ ಬಲಮ್
ಸಾಮ ಸಂತಾನಃ ಇತ್ಯುಕ್ತಃ ಶಿಕ್ಷಾಧ್ಯಾಯಃ

'ಶಿಕ್ಷಾಂ ವ್ಯಾಖ್ಯಾಸ್ಯಾಮಃ' ಎಂದರೆ ಶಿಕ್ಷೆಯನ್ನು ಕುರಿತು ಈಗ ವ್ಯಾಖ್ಯಾನ ಮಾಡುತ್ತೇವೆ ಎಂದು ಹೇಳುತ್ತಾನೆ ಆಚಾರ್ಯನಾದವನು. ಶಿಕ್ಷೆ ಎಂದರೆ ಯಾವ ಶಿಕ್ಷೆ, ಕದ್ದವನಿಗೆ ಒಂದು ಶಿಕ್ಷೆ, ದರೋಡೆ ಮಾಡಿದವನಿಗೆ ಒಂದು ಶಿಕ್ಷೆ ಆದರೆ ಇಲ್ಲಿ ಶಿಷ್ಯನಿಗೆ ಎಂತಹ ಶಿಕ್ಷೆ? ಇಲ್ಲಿ ವರ್ಣ, ಸ್ವರ, ಮಾತ್ರೆ, ಬಲ, ಸಾಮ, ಸಂತಾನ ಇವುಗಳ ಕುರಿತಾದಂತಹ ಶಿಕ್ಷೆ ಎಂದು ಅರ್ಥ ಅಂದರೆ ಶಿಕ್ಷಣ ಅಂತ ಅರ್ಥ. ವರ್ಣ ಸ್ವರಃ ಮಾತ್ರಾ ಬಲಮ್ ಸಾಮಸಂತಾನಃ ಎಂದು. ಒಂದು ಭಾಷೆ ನಮಗೆ ಹೃದ್ಗತವಾಗಬೇಕಾದರೆ ಅದರ ಪ್ರತಿಯೊಂದು ಅಕ್ಷರವನ್ನೂ ಕೂಡ, ಪ್ರತಿಯೊಂದು ಶಬ್ದವನ್ನೂ ಕೂಡ ಕ್ರಮಬದ್ಧವಾಗಿ ಉಚ್ಚರಿಸಲು ಗೊತ್ತಿರಬೇಕಾಗುತ್ತದೆ. ವರ್ಣ, ಅಕ್ಷರ, ಮಾತ್ರೆ, ಸ್ವರ, ಹ್ರಸ್ವ, ದೀರ್ಘ, ಪ್ಲುತ ಮೊದಲಾದವುಗಳನ್ನು ಶಾಸ್ತ್ರೀಯವಾಗಿ ಅಭ್ಯಾಸಮಾಡಬೇಕು. ಅತ್ಯಮೂಲ್ಯವಾದಂತಹ ಬ್ರಹ್ಮಜ್ಞಾನವನ್ನು ವಿವರಿಸುವಂತಹ ಸಂಸ್ಕೃತ ಭಾಷೆಯನ್ನು ಕ್ರಮಬದ್ಧವಾಗಿ ಅರಿತುಕೊಳ್ಳದೆ ಹೋದರೆ ಅದು ವಿವರಿಸಹೊರಟಂತಹ ತತ್ತ್ವವನ್ನು ಯಥಾರ್ಥವಾಗಿ ತಿಳಿದುಕೊಳ್ಳುವುದಕ್ಕೆ ಸಾಧ್ಯವಾಗುವುದಿಲ್ಲ. ಆದ್ದರಿಂದ ಆಚಾರ್ಯನಾದವನು ತನ್ನ ಶಿಷ್ಯನಿಗೆ ಭಾಷಾಶಾಸ್ತ್ರವನ್ನು ಬೋಧಿಸುತ್ತಿದ್ದಾನೆ.

ವರ್ಣಸ್ವರಃ ಮಾತ್ರಾ ಬಲಮ್
ಸಾಮ ಸಂತಾನಃ

ವರ್ಣ ಎಂದರೆ, ಅಕ್ಷರ ಸಮೂಹ, ಸ್ವರ ಎಂದರೆ, ಉದಾತ್ತ ಅನುದಾತ್ತ ಸಹಿತ. ಮಾತ್ರೆ ಎಂದರೆ ಹ್ರಸ್ವ, ದೀರ್ಘ ಪ್ಲುತ, ಬಲ ಎಂದರೆ, ಯಾವ ಯಾವ ಅಕ್ಷರವನ್ನು, ಶಬ್ದವನ್ನು ಎಷ್ಟು ಗಟ್ಟಿಯಾಗಿ ಉಚ್ಚರಿಸಬೇಕು ಎನ್ನುವ ಪ್ರಜ್ಞೆ. ಹೀಗೆ ಸಂತಾನ ಎಂದರೆ, ಒಂದು ವಾಕ್ಯದಲ್ಲಿರುವ ಶಬ್ದಗಳನ್ನು ಎಷ್ಟು ಉದ್ದಕ್ಕೆ ಎಳೆದು ಉಚ್ಚರಿಸಿದರೆ ಅರ್ಥ ಸ್ಪಷ್ಟವಾಗುತ್ತದೋ

ಅದು ಶಬ್ದಗಳನ್ನು ಉಚ್ಚರಿಸುವಾಗ ಎಳೆಯುವುದು ಹೆಚ್ಚು ಕಡಿಮೆಯಾದಾಗ ಅರ್ಥವೇ ವ್ಯತ್ಯಾಸವಾಗಿಬಿಡುತ್ತದೆ. ಆದ್ದರಿಂದ ಇಲ್ಲಿ ಶಬ್ದಶಾಸ್ತ್ರದ ನೆನಪನ್ನು ಆಚಾರ್ಯ ಶಿಷ್ಯನಿಗೆ ಮಾಡಿಕೊಡುತ್ತಿದ್ದಾನೆ. ಶಿಷ್ಯನಾದವನು ಬ್ರಹ್ಮವಿದ್ಯೆಯನ್ನು ಅರಿತುಕೊಳ್ಳಲು ಗುರುಗಳಲ್ಲಿ ಬರುವವೇಳೆಗಾಗಲೇ ಭಾಷಾಶಾಸ್ತ್ರವನ್ನು ಕಲಿತುಕೊಂಡಿದ್ದಾನೆ ಎಂದರ್ಥ. ಆದ್ದರಿಂದಲೇ ಗುರುಗಳು ಮೂರೇ ವಾಕ್ಯಗಳಲ್ಲಿ ಅವನಿಗೆ ಹಿಂದಿನ ಭಾಷಾಶಾಸ್ತ್ರವನ್ನು ಹೇಳಿ ಮುಗಿಸಿದ್ದಾರೆ. ಶಾಸ್ತ್ರಗಳಲ್ಲಿ ಹಾಗೂ ಉಪನಿಷತ್ತುಗಳಲ್ಲಿ ಬರುವ ಶಬ್ದಗಳೆಲ್ಲ ಕೇವಲ ಶಬ್ದಗಳಲ್ಲ. ಅವುಗಳೆಲ್ಲ ಶಬ್ದಬ್ರಹ್ಮ ಪರಬ್ರಹ್ಮವನ್ನು ತಿಳಿಸಿಕೊಡುವಂತಹ ಶಬ್ದಬ್ರಹ್ಮ ವೇದಕ್ಕೂ ಕೂಡ ಬ್ರಹ್ಮ ಎಂದು ಹೇಳುವ ಹೆಸರಿದೆ. ವೇದವೂ ಕೂಡ ಶಬ್ದಬ್ರಹ್ಮ ಈ ಶಬ್ದಬ್ರಹ್ಮವನ್ನು ಸರಿಯಾದ ರೀತಿಯಲ್ಲಿ ಉಪಾಸನೆ ಮಾಡಬೇಕಾಗಿದೆ. ಎಂದರೆ, ಭಾಷೆಯನ್ನು, ಶಬ್ದೋಚ್ಚಾರವನ್ನು ಸರಿಯಾದ ರೀತಿಯಲ್ಲಿ ಕಲಿತುಕೊಂಡು ಬ್ರಹ್ಮಜ್ಞಾನವನ್ನು ತಿಳಿಸಿಕೊಡುವ ಉಪನಿಷತ್ತಿನ ಮಂತ್ರಗಳನ್ನು ಮನನಮಾಡುವಂತಾದ್ದು. ಇದೇ ಶಬ್ದಬ್ರಹ್ಮೋಪಾಸನೆ. ಆದ್ದರಿಂದಲೇ ಮೊಟ್ಟ ಮೊದಲಿಗೆ ಈ ವರ್ಣಸ್ವರಾದಿಗಳ ವ್ಯಾಖ್ಯಾನ. ಈಗ ಮೂರನೇ ಅನುವಾಕದಲ್ಲಿ ಶಿಷ್ಯನಾದವನು ಇನ್ನೊಂದು ಪ್ರಾರ್ಥನೆ ಮಾಡಿಕೊಳ್ಳುತ್ತಾನೆ.

ಸಹನೌಯಶಃ
ಸಹ ನೌ ಬ್ರಹ್ಮವರ್ಚಸಮ್

'ಸಹನೌ ಯಶಃ' ಎಂದರೆ ನಮ್ಮಿಬ್ಬರಿಗೂ ಒಟ್ಟಿಗೆ ಯಶಸ್ಸುಂಟಾಗಲಿ. 'ಸಹ ನೌ ಬ್ರಹ್ಮವರ್ಚಸಮ್' ಎಂದರೆ ನಮ್ಮಿಬ್ಬರಲ್ಲಿಯೂ ಬ್ರಹ್ಮ ವರ್ಚಸ್ಸುಂಟಾಗಲಿ. ಶಿಷ್ಯ ಮಾಡುವ ಈ ಪ್ರಾರ್ಥನೆ ತುಂಬಾ ಸ್ವಾರಸ್ಯಕರವಾಗಿದೆ ಹಾಗೂ ತುಂಬಾ ಅರ್ಥಪೂರ್ಣವೂ ಆಗಿದೆ. ಸ್ವಾರಸ್ಯವೇನೆಂದರೆ, ಆ ಶಿಷ್ಯ ತನಗೆ ಯಶಸ್ಸುಂಟಾಗಲಿ, ತನಗೆ ಬ್ರಹ್ಮವರ್ಚಸ್ಸುಂಟಾಗಲಿ ಎಂದು ಪ್ರಾರ್ಥಿಸಿಕೊಳ್ಳದೆ ತನ್ನ ಜೊತೆಯಲ್ಲಿ ತನ್ನ ಆಚಾರ್ಯನಿಗೂ ಯಶಸ್ಸುಂಟಾಗಲಿ ಬ್ರಹ್ಮವರ್ಚಸ್ಸುಂಟಾಗಲಿ ಎಂದು ಪ್ರಾರ್ಥಿಸಿಕೊಳ್ಳುತ್ತಾನೆ. ಏಕೆ? ಆಚಾರ್ಯ ಈಗಾಗಲೇ ಸಾಕಷ್ಟು ಯಶಸ್ಸನ್ನು ಗಳಿಸಿಯೂ ಆಗಿದೆ ಬ್ರಹ್ಮವರ್ಚಸ್ಸೂ ಉಂಟಾಗಿದೆ. ಹಾಗಾದರೆ ಈ ಶಿಷ್ಯನ ಪ್ರಾರ್ಥನೆಯ ಉದ್ದೇಶವೇನು? ಎಂದರೆ, ಮೊದಲನೆಯದಾಗಿ ಇದೊಂದು ಸೌಜನ್ಯ. ಯಾವ ಒಳ್ಳೆಯದನ್ನು ತಾನು ಪಡೆಯುತ್ತೇನೋ ಅದನ್ನು ತನ್ನ ಬಳಿಯಿರುವ ಇತರರೂ ಪಡೆಯಲ್ಲಿ ಎನ್ನುವ ಸೌಜನ್ಯ. ಎರಡನೆಯದಾಗಿ ಇದೊಂದು ನಿಸ್ವಾರ್ಥ ಭಾವನೆಯ ಅನುಷ್ಠಾನ. ಕೇವಲ ತನಗೆ ಮಾತ್ರ ಒಳ್ಳೆಯದಾಗಲಿ ಅಂತ ಹೇಳುವುದು ಹೇಗಿದೆ? ಇತರರಿಗೂ ಒಳ್ಳೆಯದಾಗಲಿ ಎಂದು ಹೇಳುವ ಭಾವನೆ ಹೇಗಿದೆ? ಇಂತಹ ಸನ್ನಿವೇಶಗಳಲ್ಲೆಲ್ಲ ನಾವು ನಮ್ಮ ಹಿಂದೂ ಸಂಸ್ಕೃತಿಯ ಉದಾತ್ತತೆಯನ್ನು ಕಾಣಬಹುದಾಗಿದೆ. ಶಿಷ್ಯ ಮಾಡಿದ ಈ ಪ್ರಾರ್ಥನೆಯ ಮಹತ್ವ ಏನೆಂದರೆ, ಉಪನಿಷತ್ತನ್ನು ಸುಮ್ಮನೆ ಅಧ್ಯಯನಮಾಡಿದರೆ ಸಾಲದು ಅದು ಹೃದ್ಗತವಾಗಬೇಕು. ಅದರ ಅಂತರಾರ್ಥ ಸ್ಫುರಿಸುವಂತಾಗಬೇಕು. ಆ ಉಪನಿಷತ್ತಿನ ಜ್ಞಾನ ಎಂಬುದು ಮುಂದೆ ಬ್ರಹ್ಮಜ್ಞಾನದ ಕಡೆಗೆ ಕರೆದೊಯ್ಯಬೇಕು ಹೀಗಾದರೆ ಮಾತ್ರ ಉಪನಿಷತ್ತಿನ ಪ್ರವಚನ ಅಧ್ಯಯನ ಮಾಡಿದ್ದು ಯಶಸ್ವಿಯಾಯಿತು ಅಂತ ಅರ್ಥ. ಅಂದರೆ ಆಚಾರ್ಯ ಮಾಡಿದ ಪ್ರವಚನವೂ ಯಶಸ್ವಿಯಾಯಿತು, ಶಿಷ್ಯ ಮಾಡಿದ ಅಧ್ಯಯನವೂ ಯಶಸ್ವಿಯಾಯಿತು ಎಂದು ಅರ್ಥ. ಹೀಗೆ ಇದು ಯಶಸ್ವಿಯಾಗುವುದಕ್ಕೋಸ್ಕರ ಶಿಷ್ಯ ಇಲ್ಲಿ ಪ್ರಾರ್ಥಿಸಿಕೊಳ್ಳುತ್ತಿದ್ದಾನೆ ಸಹ ನೌಯಶಃ ಅಂತ. ಇಲ್ಲಿ ಶಿಷ್ಯನಾದವನು ತನ್ನ ಆಚಾರ್ಯನ ಯಶಸ್ಸಿಗಾಗಿ ಪ್ರಾರ್ಥಿಸಿಕೊಂಡದ್ದರ ಇನ್ನೊಂದು ಉದ್ದೇಶವನ್ನು ಕಾಣಬಹುದು. ಏನೆಂದರೆ, ಶಿಷ್ಯನಾದವನಿಗೆ ತನ್ನ ಗುರುವಾದವನು ವಿಖ್ಯಾತನಾಗಬೇಕು, ಪ್ರಸಿದ್ಧನಾಗಿರಬೇಕು, ಯಶೋವಂತನಾಗಿರಬೇಕು. ಅಂತಹ ಗುರುವಿನಿಂದ ಪಾಠ ಕಲಿತವನು ತಾನು ಎಂದು ಹೇಳುವಂತಹ ಒಂದು ಚಿಕ್ಕ ಸ್ವಾರ್ಥ ಕೂಡ ಇದೆ. ಈ ಒಂದು ಆಸೆ ಅವನಲ್ಲಿರುತ್ತದೆ. ಇದು ಒಂದು ಸಾತ್ವಿಕ ಆಸೆ. ಆಚಾರ್ಯನಾದವನು ವಿಖ್ಯಾತನಾಗಿ, ಯಶೋವಂತನಾಗಿದ್ದರೆ ಅಂತಹವನ ಮೇಲೆ ಶಿಷ್ಯನಿಗೆ ಶ್ರದ್ಧೆ ಹೆಚ್ಚಾಗುತ್ತದೆ. ಅಂತಹ ಆಚಾರ್ಯ ಮಾಡುವ ಪ್ರವಚನದ ಮೇಲೆ ಶ್ರದ್ಧೆ ಹೆಚ್ಚುತ್ತದೆ.

ಶ್ರದ್ಧೆ ಹೆಚ್ಚಿದಾಗ ಜ್ಞಾನ ಪ್ರಾಪ್ತವಾಗುವುದು ಸುಲಭವಾಗುತ್ತದೆ. 'ಶ್ರದ್ಧಾವಾನ್ ಲಭತೇ ಜ್ಞಾನಂ' ಆದ್ದರಿಂದ ಎಲ್ಲ ಭಾವನೆಗಳನ್ನೂ ಅಂತರ್ಗತಮಾಡಿಕೊಂಡು, ಅರ್ಥಮಾಡಿಕೊಂಡು ಶಿಷ್ಯ ಪ್ರಾರ್ಥಿಸಿಕೊಳ್ಳುತ್ತಾನೆ. ಸಹ ನೌ ಯಶಃ ಅಂತ - ನಂತರ ಸಹ ನೌ ಬ್ರಹ್ಮವರ್ಚಸಮ್ ವರ್ಚಸ್ಸು ಎಂದರೆ ಮುಖದ ಕಳೆ, ಹಾಗೂ ವ್ಯಕ್ತಿತ್ವದ ಕಲೆ. ದಿವಂಗತ ಡಿ.ವಿ.ಜಿ. ಯವರು ತಮ್ಮ ಮಂಕುತಿಮ್ಮನ ಕಗ್ಗದಲ್ಲಿ ಒಂದು ಮಾತು ಹೇಳುತ್ತಾರೆ. 'ವಕ್ತ್ರವುಂಟೆಲ್ಲರಿಗೆ ವರ್ಚಸ್ಸೋರೋರ್ವರಿಗೆ' ಅಂದರೆ ಮುಖವೇನೋ ಎಲ್ಲರಿಗೂ ಇದೆ. ಆದರೆ ವರ್ಚಸ್ಸು ಎಲ್ಲೋ ಒಬ್ಬರಿಗೆ ಮಾತ್ರ ಇದೆ ಎಂದು. ಕೇವಲ ಕಣ್ಣು, ಕಿವಿ ಇದ್ದರೆ ಸಾಲದು. ಲಕ್ಷಣ ಇದ್ದರೆ ಸಾಲದು. ಅದರಲ್ಲಿ ಸರಿಯಾದ ವರ್ಚಸ್ಸಿದ್ದರೆ ಮಾತ್ರ ಅಂತಹ ವ್ಯಕ್ತಿತ್ವದ ಹಿನ್ನೆಲೆಯಲ್ಲಿ ಸತ್ವ ಇದೆ ಅಂತ ಅಂದುಕೊಳ್ಳಬಹುದು. ಇಲ್ಲಿ ಬ್ರಹ್ಮವಿದ್ಯೆಯಾದ ಉಪನಿಷತ್ತು ಅಧ್ಯಯನ ಮಾಡಿದ್ದು ಯಶಸ್ವಿಯಾಗುತ್ತಾ ಇದೆ ಎನ್ನುವುದಕ್ಕೆ ಏನು ಸಾಕ್ಷಿ ಎಂದು ಕೇಳಿದರೆ ಮುಖದಲ್ಲಿ ಹಾಗೂ ವ್ಯಕ್ತಿತ್ವದಲ್ಲಿ ಬ್ರಹ್ಮವರ್ಚಸ್ಸು ಮಿನುಗುತ್ತಾ ಇರಬೇಕು. ಇಲ್ಲಿ ಬ್ರಹ್ಮವರ್ಚಸ್ಸು ಎಂಬ ಶಬ್ದದಲ್ಲಿರುವ ಬ್ರಹ್ಮ ಎಂಬ ಪದಕ್ಕೆ ೩ ಅರ್ಥಗಳಿವೆ. ಬ್ರಹ್ಮ ಎಂದರೆ ವೇದ, ಬ್ರಹ್ಮ ಎಂದರೆ ಪರಬ್ರಹ್ಮ ಬ್ರಹ್ಮ ಎಂದರೆ ತಪಸ್ಸು ಎಂದರ್ಥ, ವೇದದ ಅಂಗವಾದ ಉಪನಿಷತ್ತನ್ನು ಅಧ್ಯಯನ ಮಾಡುವುದರಿಂದ ವರ್ಚಸ್ಸು ವೃದ್ಧಿಯಾಗುತ್ತದೆ. ಪರಬ್ರಹ್ಮನನ್ನು ಭಾವಿಸುವುದರಿಂದ ವರ್ಚಸ್ಸು ವೃದ್ಧಿಯಾಗುತ್ತದೆ, ಇಲ್ಲಿ ಪರಬ್ರಹ್ಮವನ್ನು ಭಾವಿಸುತ್ತ, ಬ್ರಹ್ಮವಿದ್ಯೆಯಾದ ಉಪನಿಷತ್ತನ್ನು ಸರಿಯಾಗಿ ಅಧ್ಯಯನ ಮಾಡುವುದೇ ಒಂದು ಬಗೆಯ ತಪಸ್ಸು. ಹೀಗೆ ತಪಸ್ಸಿನ ಆಚರಣೆ, ಉಪನಿಷತ್ತಿನ ಅಧ್ಯಯನ ಹಾಗೂ ಬ್ರಹ್ಮಭಾವನೆ ಈ ಮೂಲಕ ನಮ್ಮಲ್ಲಿ ಬ್ರಹ್ಮವರ್ಚಸ್ಸು ವರ್ಧಿಸಲಿ ಎಂದು ಶಿಷ್ಯ ಪ್ರಾರ್ಥಿಸಿಕೊಳ್ಳುತ್ತಾನೆ. ಇಲ್ಲಿ ಒಂದು ಪ್ರಶ್ನೆ ಏಳಬಹುದು. ಏನೆಂದರೆ, ಉಪನಿಷತ್ತನ್ನು ಅಧ್ಯಯನ ಮಾಡುವುದು ಮುಖದ ವರ್ಚಸ್ಸನ್ನು ಹೆಚ್ಚಿಸಿಕೊಳ್ಳುವುದಕ್ಕಾಗಿಯೇ ಅಂತ ಹಾಗಲ್ಲ. ವರ್ಚಸ್ಸನ್ನು ಏತಕ್ಕಾಗಿ ಬಯಸುತ್ತಾ ಇದ್ದಾನೆ ಅಂದರೆ, ವರ್ಚಸ್ಸು ವೃದ್ಧಿಯಾಗಿ ಬೆಳಗುತ್ತಾ ಬಂದಾಗ ತಾನು ಮಾಡುತ್ತಾ ಇರುವ ಉಪನಿಷತ್ತಿನ ಅಧ್ಯಯನ ಪರಿಣಾಮಕಾರಿಯಾಗುತ್ತಾ ಇದೆ. ಅದರ ಅಂತರಾರ್ಥ ನನ್ನ ಮನಸ್ಸಿಗೆ ಸ್ಫುರಿಸುತ್ತಾ ಇದೆ ಎಂದು ಶ್ರದ್ಧೆ ಹೆಚ್ಚುತ್ತದೆ. ಯಾವ ವಿಷಯವೇ ಆಗಲಿ ನಮಗೆ ಅರ್ಥವಾದಾಗ ಸಂತೋಷವಾಗುತ್ತದೆ. ಸಂತೋಷವಾದಾಗ ಮುಖದಲ್ಲಿ ಕಾಂತಿ ಮಿನುಗುತ್ತದೆ. ಹೀಗೆ ಈ ಉಪನಿಷತ್ತಿನಲ್ಲಿ ಶಿಷ್ಯನಾದವನು ಬ್ರಹ್ಮವರ್ಚಸ್ಸಿಗಾಗಿ ಪ್ರಾರ್ಥಿಸಿಕೊಂಡದ್ದರ ಮಹತ್ವವನ್ನು ಮನಗಾಣಬೇಕು ನಾವು.



# ಶ್ರೀ ವೆಂಕಟೇಶ್ವರ ಸ್ವಾಮಿ ದೇವಾಲಯ

ತಿರುಮಲೆ

## ಆರ್ಜಿತ ಸೇವಾ ವಿವರ



### ದೈನಂದಿನ ಸೇವೆಗಳು :

| ಸೇವೆ | ಶುಲ್ಕ | ಪ್ರವೇಶಾವಕಾಶ | ಕಾಲ |
|---|---|---|---|
| 1. ಸುಪ್ರಭಾತದರ್ಶನ | ರೂ. 100/- | ಒಬ್ಬರಿಗೆ | ಪ್ರಾ - 2-30 |
| 2. ತೋಮಾಲೆಸೇವೆ | ರೂ. 200/- | ಒಬ್ಬರಿಗೆ | ಪ್ರಾ - 3-30 |
| 3. ಅರ್ಚನೆ | ರೂ. 200/- | ಒಬ್ಬರಿಗೆ | ಪ್ರಾ - 4-30 |
| 4. ಶುಕ್ರವಾರಗಳಲ್ಲಿ ಅರ್ಚನೆ ಹಾಗೂ ತೋಮಾಲೆಸೇವೆ | ರೂ. 400/- | ಒಬ್ಬರಿಗೆ | ಪ್ರಾ - 6-30 |
| 5. ಆ ಮಂತ್ರಣೋತ್ಸವ | | | |
| ಶುಕ್ರವಾರಗಳ ಹೊರತು | ರೂ. 600/- | ಒಬ್ಬರಿಗೆ | ಪ್ರಾ - 3-30 |
| ಶುಕ್ರವಾರಗಳಲ್ಲಿ | ರೂ. 600/- | ಒಬ್ಬರಿಗೆ | ಪ್ರಾ - 6-30 |
| 6. ನಿಜಪಾದ ದರ್ಶನ ಶುಕ್ರವಾರಗಳಲ್ಲಿ | ರೂ. 100/- | ಒಬ್ಬರಿಗೆ | ಪ್ರಾ - 5-30 |
| 7. ವಿಶೇಷ ಪ್ರವೇಶ | ರೂ. 30/- | ಒಬ್ಬರಿಗೆ | ಸರ್ವದರ್ಶನದ ವೇಳೆ |
| 8. ಏಕಾಂತಸೇವೆ | ರೂ. 100/- | ಒಬ್ಬರಿಗೆ | ರಾತ್ರಿ - 10-30 ನಂತರ |

ಸೂಚನೆ :-- 1 ರಿಂದ 6 ರ ವರೆಗಿನ ಸೇವೆಗಳಿಗೆ 90 ದಿನಗಳ ವರೆಗೆ ಮೊದಲೇ ಮಿಾಸಲಾತಿ ಪಡೆಯಬಹುದು. ವಿಶೇಷ ಪ್ರವೇಶ, ಏಕಾಂತ ಸೇವೆಗಳಿಗೆ ಮುಂಗಡ ಕಾಯ್ದಿರಿಸುವಿಕೆಯಿಲ್ಲ. ಏಕಾಂತ ಸೇವೆಯ ಟಿಕೆಟ್‌ಗಳನ್ನು ರಾತ್ರಿ 10-30 ರ ನಂತರ ಸರ್ವದರ್ಶನಾನಂತರದ ಕಾಲಾವಕಾಶವನ್ನು ಅನುಸರಿಸಿ ನೀಡಲಾಗುವುದು.

### ಉತ್ಸವಗಳು :

1. ಕಲ್ಯಾಣೋತ್ಸವ - ರೂ. 2500/- ಬೆಳಗ್ಗೆ 10 ಗಂ|| 5 ಮಂದಿಗೆ ಪ್ರವೇಶ.
   ಬಹುಮಾನ : ಉತ್ತರೀಯ, ಕುಪ್ಪಸದಕಣ, ದೊಡ್ಡ ಲಾಡು-5, ಅಪ್ಪ-5, ವಡೆ-5, ದೋಸೆ-5, ಸಿಹಿ ಪೊಂಗಲು, ಪೊಂಗಲು, ಪುಳಿಯೋಗರೆ, ದಧ್ಯೋದನ $\frac{1}{16}$ ಸೋಲಿ.
2. ಪ್ರತ್ಯೇಕ ಕಲ್ಯಾಣೋತ್ಸವ- ರೂ. 750/- ಬೆಳಗ್ಗೆ 10 ಗಂ|| ಇಬ್ಬರಿಗೆ ಪ್ರವೇಶ.
   ಬಹುಮಾನ : ಉತ್ತರೀಯ, ಕುಪ್ಪಸದಕಣ, ಲಾಡು-1, ವಡೆ-1.
3. ಆರ್ಜಿತ ಬ್ರಹ್ಮೋತ್ಸವ ರೂ. 500/- ದಿನಕ್ಕೆ ಮಧ್ಯಾಹ್ನ 1 ಗಂ|| 5 ಮಂದಿಗೆ ಪ್ರವೇಶ. ವಾಹನಗಳು - ದೊಡ್ಡ ಶೇಷವಾಹನ, ಬೆಳ್ಳಿಯ ಗರುಡವಾಹನ, ಬೆಳ್ಳಿಯ ಹನುಮಂತವಾಹನ.
4. ಡೋಲೋತ್ಸವ (ಊಂಜಲ್‌ಸೇವೆ) ರೂ. 750/- ಮಧ್ಯಾಹ್ನ - 1-30 ಗಂ|| 6 ಮಂದಿಗೆ ಪ್ರವೇಶ.
   ಮುಕುರಮಂಟಪದಲ್ಲಿ ನಡೆಯುವ ಈ ಸೇವೆಯಲ್ಲಿ ಶೇಷವಸ್ತ್ರ ಬಹುಮಾನವಿದೆ.
5. ವಸಂತೋತ್ಸವ : ರೂ. 3000/- ದಿನಕ್ಕೆ ಮಧ್ಯಾಹ್ನ - 2 ಗಂ|| 10 ಮಂದಿಗೆ ಪ್ರವೇಶ.
   ಬಹುಮಾನ: ವಸ್ತ್ರ, ವಡೆ-6, ದೋಸೆ-20, ದಧ್ಯೋದನ, ಪುಳಿಯೋಗರೆ, ಪೊಂಗಲ್, ಸಿಹಿಪೊಂಗಲ್.
6. ಸಹಸ್ರ ದೀಪಾಲಂಕಾರ : ರೂ. 500/- ಸಂಜೆ - 5-30 ಗಂ||, ಈ ಸೇವೆ ಆಲಯದ ಹೊರಗೆ ನಡೆಯುತ್ತದೆ. ಸೇವೆಯನಂತರ ವೈಕುಂಠದ ಮೂಲಕ 5 ಮಂದಿಗೆ ದರ್ಶನಾವಕಾಶ. ಬಹುಮಾನ - ವಸ್ತ್ರ.

ಸೂಚನೆ : 1ರಿಂದ 6 ರ ವರೆಗೆ ಎಲ್ಲ ಸೇವೆಗಳಿಗೂ ಮುಂಗಡ ಕಾಯ್ದಿರಿಸುವಿಕೆ 90 ದಿನಗಳ ಮೊದಲು ಮಾಡಬಹುದು.

### ವಾರ ಸೇವೆಗಳು - ಉತ್ಸವಗಳು

1. ವಿಶೇಷ ಪೂಜೆ - (ಸೋಮವಾರಗಳಲ್ಲಿ) ರೂ. 3000/- ಬೆಳಗ್ಗೆ 6-00 ಗಂ|| 5 ಮಂದಿಗೆ ಪ್ರವೇಶ.
   ಬಹುಮಾನ - ವಸ್ತ್ರ - ದೊಡ್ಡ ಲಾಡು-5, ವಡೆ-5.
2. ಅಷ್ಟದಳ ಪಾದ ಪದ್ಮಾರಾಧನೆ - (ಮಂಗಳವಾರಗಳಲ್ಲಿ) ರೂ. 3500/- ಬೆಳಗ್ಗೆ - 5-30 ಗಂ||, 5ಮಂದಿಗೆ ಪ್ರವೇಶ.
   ಬಹುಮಾನ : ವಸ್ತ್ರ ದೊಡ್ಡಲಾಡು-10, ವಡೆ-10.

3. ಸಹಸ್ರ ಕಲಶಾಭಿಷೇಕ (ಬುಧವಾರಗಳಲ್ಲಿ) ರೂ. 5000/- ಬೆಳಗ್ಗೆ- 5-30 ಗಂ||, 6 ಮಂದಿಗೆ ಪ್ರವೇಶ.

ಬಹುಮಾನ : ವಸ್ತ್ರ, ದೊಡ್ಡಲಾಡು-7, ವಡೆ-7, ದೋಸೆ-5, ಅಪ್ಪ-5, ದಧ್ಯೋದನ, ಪುಳಿಯೋಗರೆ, ಪೊಂಗಲ್, ಸಿಹಿಪೊಂಗಲ್, ಪಾಯಸ, $\frac{1}{32}$ ಸೋಲ.

4. ತಿರುಪ್ಪಾವಡಾ (ಗುರುವಾರಗಳಲ್ಲಿ) ರೂ. 5000/- ಬೆಳಗ್ಗೆ - 5-30 ಗಂ|| 6 ಮಂದಿಗೆ ಪ್ರವೇಶ.

ಬಹುಮಾನ : ವಸ್ತ್ರ, ದೊಡ್ಡಲಾಡು 7, ವಡೆ - 7, ಅಪ್ಪ-5, ದೋಸೆ-5, ತೆನೆತೊಳೆ-5, ಜಿಲೇಬಿ-5, ಪುಳಿಯೋಗರೆ, ಪಾಯಸ - $\frac{1}{32}$ ಸೋಲ.

5. ಅಭಿಷೇಕ (ಶುಕ್ರವಾರಗಳಲ್ಲಿ) ಬೆಳಗ್ಗೆ - 3-30 ಗಂ||

ಪೂರಾಭಿಷೇಕ - ರೂ. 750/- ಒಬ್ಬರಿಗೆ, ಬಹುಮಾನ - 2 ಚಿಕ್ಕಲಾಡು, 2 ವಡೆ.

ಪುನುಗುಬಟ್ಟಲು - ರೂ. 300/- ಒಬ್ಬರಿಗೆ, ಬಹುಮಾನ - 1 ಚಿಕ್ಕ ಲಾಡು, 1 ವಡೆ.

ಕಸ್ತೂರಿ ಬಟ್ಟಲು - ರೂ. 150/- ಒಬ್ಬರಿಗೆ, ಬಹುಮಾನ - 1 ಚಿಕ್ಕ ಲಾಡು, 1 ವಡೆ.

ಸೂಚನೆ :-- 1 ರಿಂದ 4 ರ ವರೆಗೆ 90 ದಿನಗಳ ಮೊದಲು ಮುಂಗಡ ಕಾಯ್ದಿರಿಸುವ ಅವಕಾಶವುಂಟು. ಅಭಿಷೇಕದ ಮುಂಗಡ ಕಾಯ್ದಿರಿಸುವಿಕೆಯನ್ನು ಒಂದು ವರ್ಷದ ಮೊದಲು ಟಿಕೆಟ್‌ಗಳು ದೊರೆಯುವ ಅವಕಾಶ ವಿದ್ದಲ್ಲಿ ಅಂಗೀಕರಿಸಲಾಗುವುದು.

## ವಾರ್ಷಿಕ ಸೇವೆಗಳು

1. ಪವಿತ್ರೋತ್ಸವ : ರೂ. 7500/- ಮೂರು ದಿನಗಳ ಉತ್ಸವ. ಸಾಮಾನ್ಯವಾಗಿ ಆಗಸ್ಟ್ ತಿಂಗಳಿನಲ್ಲಿ ನಡೆಯುತ್ತದೆ. ಉತ್ಸವ ಕಾಲದಲ್ಲಿ ಐದುಮಂದಿಗೆ ಪ್ರವೇಶ. ಒಂದು ದಿನ ಮಾತ್ರ ಆಲಯದ ಅನುಕೂಲಕ್ಕೆ ತಕ್ಕಂತೆ ತೋಮಾಲೆಸೇವೆ ಹಾಗು ಅರ್ಚನೆಗೆ ಇಬ್ಬರನ್ನು ಅನುಮತಿಸಲಾಗುವುದು.

ಬಹುಮಾನ : 2 ಹಾಗೂ 3 ನೇ ದಿನಗಳು - 30 ದೋಸೆ, ಪೊಂಗಲು, 3ನೇ ದಿನ - 6 ವಡೆ - ವಸ್ತ್ರ.

2. ಪುಷ್ಪಯಾಗ : ರೂ. 3500/- ಒಂದು ದಿನ. ಬೆಳಗ್ಗೆ 6 ಗಂಟೆಗೆ. ವಾರ್ಷಿಕ ಬ್ರಹ್ಮೋತ್ಸವದ ನಂತರದ ಶ್ರವಣ ನಕ್ಷತ್ರದ ದಿನ ನಡೆಯುವುದು. 5 ಮಂದಿಗೆ ಪ್ರವೇಶ.

ಬಹುಮಾನ : ವಸ್ತ್ರ, ಉತ್ತರೀಯ, ದೊಡ್ಡಲಾಡು 1, ವಡೆ - 1.

3. ಪ್ಲವೋತ್ಸವ : ರೂ. 2500/- ಒಂದು ದಿನಕ್ಕೆ, ಸಂಜೆ 6 ಗಂಟೆಗೆ, ಸಾಮಾನ್ಯವಾಗಿ ಫೆಬ್ರವರಿ ಮಾರ್ಚ್‌ನಲ್ಲಿ ಐದು ದಿನ ನಡೆಯುವ ಉತ್ಸವ. 5 ಮಂದಿಗೆ ಪ್ರವೇಶ.

ಬಹುಮಾನ : ಉತ್ತರೀಯ ಹಾಗೂ ಕುಪ್ಪುಸದ ಕಣ.

4. ಪದ್ಮಾವತೀ ಪರಿಣಯ : ರೂ. 5000/- ದಿನಕ್ಕೆ ಮಧ್ಯಾಹ್ನ - 3 ಗಂಟೆಗೆ, ಸಾಮಾನ್ಯವಾಗಿ ಪ್ರತಿವರ್ಷ ಜೂನ್ ತಿಂಗಳಿನಲ್ಲಿ ಮೂರುದಿನ ನಡೆಯುತ್ತದೆ. 5 ಮಂದಿಗೆ ಪ್ರವೇಶ.

ಬಹುಮಾನ : ವಸ್ತ್ರ, ಕುಪ್ಪುಸದ ಕಣ, ಲಾಡು 5, ವಡೆ 5.

5. ಅಭಿಧ್ಯೇಕ ಅಭಿಷೇಕ : ರೂ. 2000/- ದಿನಕ್ಕೆ ಬೆಳಗ್ಗೆ - 8 ಗಂಟೆಗೆ - ಪ್ರತಿವರ್ಷ ಸಾಮಾನ್ಯವಾಗಿ ಜೂನ್ ತಿಂಗಳಿನಲ್ಲಿ ನಡೆಯುತ್ತದೆ. 5 ಮಂದಿಗೆ ಪ್ರವೇಶ.

ಬಹುಮಾನ : ಉತ್ತರೀಯ, ಕುಪ್ಪುಸದಕಣ, ಲಾಡು 1, ವಡೆ 1.

6. ಪುಷ್ಪ ಪಲ್ಲಕ್ಕಿ : ರೂ. 1000/- ಸಂಜೆ 5-30 ಗಂಟೆಗೆ. ಆನಿವರ ಆಸ್ಥಾನದ ದಿನದ ಸಂಜೆ ನಡೆಯುತ್ತದೆ. ಸಾಮಾನ್ಯವಾಗಿ ಪ್ರತಿವರ್ಷ ಜುಲೈ ತಿಂಗಳಿನಲ್ಲಿ. 5 ಮಂದಿಗೆ ಪ್ರವೇಶ.

ಬಹುಮಾನ : ಉತ್ತರೀಯ - ಕುಪ್ಪುಸದ ಕಣ, ಲಾಡು-1, ವಡೆ-1.

7. ಕೋಯಿಲ್ ಆಳ್ವಾರ್ ತಿರುಮಂಜನ : ರೂ. 3000/- ಬೆಳಗ್ಗೆ - 11 ಗಂಟೆಗೆ. ವರ್ಷದಲ್ಲಿ ನಾಲ್ಕು ಬಾರಿ ಮಂಗಳವಾರಗಳಲ್ಲಿ, ಉಗಾದಿ, ಆನಿವರ ಆಸ್ಥಾನ, ಬ್ರಹ್ಮೋತ್ಸವ, ವೈಕುಂಠ ಏಕಾದಶಿಗಳ ಮೊದಲು ನಡೆಯುತ್ತದೆ. 10 ಮಂದಿಗೆ ಪ್ರವೇಶ.

ಬಹುಮಾನ : ವಸ್ತ್ರ, ಲಾಡು 15, ವಡೆ 15, ಅಪ್ಪ 10, ದೋಸೆ 10 ಹಾಗೂ ಅನ್ನಪ್ರಸಾದ.

ಸೂಚನೆ :-- ಎಲ್ಲ ವಾರ್ಷಿಕ ಉತ್ಸವಗಳಿಗೂ ಅವಕಾಶ ಇದ್ದಂತೆ ಮುಂಗಡವಾಗಿ ಕಾಯ್ದಿರಿಸಲಾಗುವುದು.

## ಅನ್ನಪ್ರಸಾದಗಳು :

ಕೆಳಕಂಡ ಅನ್ನಪ್ರಸಾದಗಳ ನಿವೇದನೆಗಾಗಿ ಶುಲ್ಕವನ್ನು ಅಂಗೀಕರಿಸಲಾಗುತ್ತದೆ. ಪ್ರತಿಯೊಂದರ $\frac{1}{4}$ ಸೋಲವನ್ನು ನೀಡಲಾಗುವುದು.

1. ದಧ್ಯೋದನ - ರೂ. 100/-
2. ಪುಳಿಯೋಗರೆ - ರೂ. 200/-
3. ಪೊಂಗಲ್ - ರೂ. 225/-
4. ಸಕ್ಕರೆ ಪೊಂಗಲ್ - ರೂ. 250/-
5. ಶಾಕರಬಾತ್ - ರೂ. 250/-
6. ಸೀರಾ - ರೂ. 450/-
7. ಪಾಯಸ - ರೂ. 225/-

## ಲಾಡು ಪಡಿ :

ದೊಡ್ಡ ಲಾಡು ಪಡಿ - ರೂ. 2500/-

ಕಿರಿಯ ಲಾಡು ಪಡಿ - ರೂ. 750/-

ಒಂದು ಟಿಕೆಟ್ ಪಡೆದಲ್ಲಿ ಐದು ಮಂದಿಗೆ ಪ್ರವೇಶಾವಕಾಶ. ದರ್ಶನಾನಂತರ 30 ಲಾಡುವನ್ನು ನೀಡಲಾಗುವುದು.

## ಇತರ ವಾರ್ಷಿಕ ಯೋಜನೆಗಳು :

1. ಉದಯಾಸ್ತಮಾನ ಸರ್ವ ಸೇವಾ ಯೋಜನೆ:

ಶುಕ್ರವಾರದ ಹೊರತು ಇತರ ಯಾವುದೇ ದಿನದಲ್ಲಿ ಸೇವೆಗೆ ದತ್ತಿ ರೂ. 1 ಲಕ್ಷ

ಶುಕ್ರವಾರಗಳ ಸೇವೆಗೆ ದತ್ತಿ ರೂ. 3 ಲಕ್ಷ

ದತ್ತಿ ನೀಡಿದವರನ್ನು (ಒಟ್ಟಿ ಆರು ಮಂದಿ) ಸುಪ್ರಭಾತದಿಂದ ಏಕಾಂತಸೇವೆಯ ವರೆಗೆ ಎಲ್ಲ ಸೇವೆಗಳಿಗೂ ಅನುಮತಿಸಲಾಗುವುದು. ಆ ದಿನದ ಇತರ ಎಲ್ಲ ಆರ್ಜಿತ ಸೇವೆಗಳನ್ನೂ ನೋಡಲು ಅವಕಾಶ ನೀಡಲಾಗುವುದು.

ಬಹುಮಾನ : ಒಂದು ಕಲ್ಯಾಣೋತ್ಸವ ವಸ್ತ್ರ, 25 ಲಾಡು, 5 ವಡೆ (ಪ್ರತಿವರ್ಷ).

2. ಬಾಲಾಜೀ ಅರ್ಚನಾಯೋಜನೆ : ಈ ಯೋಜನೆಗೆ ನೀಡಬೇಕಾದ ದತ್ತಿ ರೂ. 6000/-

ದತ್ತಿ ನೀಡುವವರ ಹೆಸರಿನಲ್ಲಿ ಐದು ವರ್ಷಗಳ ಕಾಲ ವರ್ಷಕ್ಕೆ ಒಮ್ಮೆ ಅರ್ಚನೆಯನ್ನು ಮಾಡಲಾಗುವುದು. ದತ್ತಿ ನೀಡುವವರು ಅರ್ಚನೆಯ ದಿನವನ್ನು ಆಯ್ಕೆ ಮಾಡಿಕೊಳ್ಳಬಹುದು. ಯಾವುದೇ ವರ್ಷದಲ್ಲಿ ಈ ಆಯ್ಕೆಯ ದಿನ ಶುಕ್ರವಾರ ಬಂದರೆ ಮಾರನೆಯ ದಿನಕ್ಕೆ ಅನುಮತಿಸಲಾಗುವುದು.

ಸೌಲಭ್ಯ : ದತ್ತಿ ನೀಡಿದವರಿಗೆ ಅರ್ಚನೆಯ ದಿನದಂದು ಉಚಿತ ವಸತಿ ನೀಡಲಾಗುವುದು. ಮೂರು ಮಂದಿಯನ್ನು ಅರ್ಚನೆಗೆ ಅನುಮತಿಸಲಾಗುವುದು. ಸುಪ್ರಭಾತಸೇವೆ ಹಾಗು ವಿಶೇಷ ಪ್ರವೇಶದಲ್ಲಿ ಮೂರು ಮಂದಿಯನ್ನು ಅನುಮತಿ ಸಲಾಗುವುದು.

ಬಹುಮಾನ : ಉತ್ತರೀಯ, ಕುಪ್ಪುಸದಕಣ, ಒಂದು ಕಿರಿಯ ಲಾಡು, ಒಂದು ವಡೆ.

## ಸಾಮಾನ್ಯ ಸೂಚನೆಗಳು

1. ಸೇವೆ ಉತ್ಸವಗಳನ್ನು ಮಾಡಿಸಲು ಕಾರ್ಯನಿರ್ವಹಣಾಧಿಕಾರಿ ತಿ.ತಿ.ದೇ. ತಿರುಪತಿ ಇವರ ಹೆಸರಿನಲ್ಲಿ ಹಣದ ಡಿ. ಡಿ. ಯನ್ನು ಪಡೆದು ಸೇವೆ, ಉತ್ಸವದ ಅಭ್ಯರ್ಥನ ಪತ್ರದೊಡನೆ ಪೇಷ್ಕಾರ್, ಶ್ರೀ ತಿರುಮಲೆ ದೇವಾಲಯ ತಿರುಮಲೆ 517 504 ಇವರಿಗೆ ಆಯಾ ಸೇವೆಗಳಲ್ಲಿ ಸೂಚಿಸಿರುವಂತೆ ಸಾಕಷ್ಟು ಮೊದಲು ಕಳುಹಿಸಬೇಕು. ಮುಂಗಡ ಕಾಯ್ದಿರಿಸುವಿಕೆಯನ್ನು ಅವಕಾಶವಿದ್ದಂತೆ ಏರ್ಪಡಿಸಿ, ಭಕ್ತರ ವಿಳಾಸಗಳಿಗೆ ಶೀಘ್ರವಾಗಿ ಖಚಿತ ಪತ್ರವನ್ನು ಕಳುಹಿಸಲಾಗುವುದು.
2. ಕಾಟೇಜುಗಳ ಮುಂಗಡ ಕಾಯ್ದಿರಿಸುವಿಕೆಗಾಗಿ ಕಾರ್ಯನಿರ್ವಹಣಾಧಿಕಾರಿ ತಿ.ತಿ.ದೇ. ತಿರುಪತಿ ಇವರ ಹೆಸರಿಗೆ ಪಡೆದ ಡಿ.ಡಿ. ಯನ್ನು ಮೂವತ್ತು ದಿನಗಳ ಮೊದಲು ಅಸಿಸ್ಟೆಂಟ್ ಎಕ್ಸಿಕ್ಯೂಟಿವ್ ಆಫೀಸರ್ ರಿಸೆಪ್ಷನ್ I ತಿ.ತಿ.ದೇ. ತಿರುಮಲೆ 517 504 ಇವರಿಗೆ ಕಳುಹಿಸಿ ಮುಂಗಡ ಪತ್ರವನ್ನು ಪಡೆಯಬೇಕು.
3. ಹೆಚ್ಚಿನ ವಿವರಗಳಿಗಾಗಿ ಕಾರ್ಯನಿರ್ವಹಣಾಧಿಕಾರಿ ತಿ.ತಿ.ದೇ. ತಿರುಪತಿ 517 501 ಇವರನ್ನು ವಿಚಾರಿಸಿ. ಸೇವೆ ಉತ್ಸವ ವಿವರಗಳಿಗಾಗಿ ಪೇಷ್ಕಾರ್, ತಿರುಮಲೆ ದೇವಾಲಯ ತಿರುಮಲೆ 517 504 ಇವರಲ್ಲಿ ವಿಚಾರಿಸಿ.
4. ಎಲ್ಲ ಸೇವೆ ಉತ್ಸವಗಳಿಗೂ ಪ್ರವೇಶಾವಕಾಶ ವೈಕುಂಠಂ ಕ್ಯೂ ಕಾಂಪ್ಲೆಕ್ಸಿನಿಂದ ಮಾತ್ರವೇ.

**ಕಾರ್ಯನಿರ್ವಹಣಾಧಿಕಾರಿ,**

ತಿ. ತಿ. ದೇವಸ್ಥಾನಗಳು, ತಿರುಪತಿ.

# ದೇಹಾಲಂಕಾರ

---ಎಸ್. ರೋಹಿಣಿ ಶರ್ಮ.

ಅಲಂಕಾರ ಪ್ರಿಯೋ ವಿಷ್ಣುಃ ಅಭಿಷೇಕ ಪ್ರಿಯೋ ಶಿವಃ - ಎನ್ನುವಂತೆ ಅಲಂಕಾರ ಎನ್ನುವುದು ದೇವಾಸುದೇವತೆಗಳಿಂದ ಹಿಡಿದು ಶ್ರೀ ಸಾಮಾನ್ಯನವರೆಗೂ ವ್ಯಾಪಿಸಿದೆ. ವಿಷ್ಣುವಿಗೆ ಪ್ರಿಯವೆಂದು ತುಳಸಿ, ಶಿವನಿಗೆ ಪ್ರಿಯವೆಂದು ಬಿಲ್ವಪತ್ರೆ ಗಣಪತಿಗೆ ಗರಿಕೆ ಮುಂತಾಗಿ ಫಲ - ಪುಷ್ಪ, ಭಕ್ಷಭೋಜ್ಯಗಳೆಲ್ಲವನ್ನು ದೇವತೆಗಳಿಗೆ ಪ್ರೀತ್ಯರ್ಥವಾದದ್ದನ್ನೆ ಅರ್ಪಿಸಿ ಧನ್ಯರಾಗುತ್ತೇವೆ.

ಪ್ರತಿದಿನ ಇಷ್ಟದೇವರನ್ನು ಪೂಜಿಸುವ ಮುನ್ನ ಶುಭ್ರವಾಗಿ ಸ್ನಾನಮಾಡಿ ದೇಹದ ಅಲಂಕಾರದೆಡೆಗಮನ ಹರಿಸುತ್ತೇವೆ.

ಅಷ್ಟಗಂಧ ಸಮಾಯುಕ್ತ
ರಕ್ತಚಂದನ ಮುತ್ತಮಮ್
ದ್ವಾದಶಾಂಗೇಷು ತೆ ದೇವ
ಲೇಪಯಾಮಿ ಕೃಪಾಂಕುರು
ದಿವ್ಯ ಪರಿಮಳ ಗಂಧಾನ್ ಸಮರ್ಪಯಾಮಿ

ಎಂಬ ಮಂತ್ರ ಪಠಿಸುತ್ತಾ ಭಗವಂತನ ಮೂರ್ತಿ ಮೇಲಿನ ಹಳೆಯ ಹೂತೆಗೆದು ಅಭಿಷೇಕ ಮಾಡಿ ಗಂಧ ಚಂದನಾದಿಗಳಿಂದ ಅಲಂಕಾರ ಮಾಡಿ ಹೊಸ ಹೂ ಏರಿಸಿ, ಪೂಜೆಗೆ ತೊಡಗುವ ಮುನ್ನ ನಾನಾ ಶೃಂಗಾರ ಸಾಧನಗಳನ್ನು ಬಳಸುತ್ತಾ ಬಂದಿರುವುದು ಮಾನವ ಸಹಜವಾದ ಪ್ರವೃತ್ತಿಯಾಗಿಯೇ ಬೆಳೆದುಬಂದಿದೆ.

ಆಧುನಿಕ ಪರಿಕರಗಳಾದ ಸುಗಂಧ ದ್ರವ್ಯಗಳು, ಅತ್ತರುಗಳು, ವೈವಿಧ್ಯದ ವೇಷ ಭೂಷಣಗಳು ಇಂದಿನ ನಾಗರೀಕತೆಯ ಲಕ್ಷಣಕ್ಕೆ ಸರಿಹೊಂದುವಂತಿದ್ದರೆ ಸ್ವಲ್ಪ ಸಂಪ್ರದಾಯಸ್ಥರು ಗಂಧ, ಕುಂಕುಮ, ಅಂಗಾರ - ಅಕ್ಷತೆ ಹಾಗೂ ಭಸ್ಮಧಾರಣೆಗಳ ಮೂಲಕ ತಮ್ಮ ದೇಹಾಲಂಕಾರವನ್ನು ಹೆಚ್ಚಿಸಿಕೊಳ್ಳುತ್ತಾರೆ. ಹಿಂದೂ ಜೀವನ ಪದ್ಧತಿಯಲ್ಲಿ ಪುರಾತನ ಹಾಗೂ ಆಧುನಿಕ ಜೀವನದ ಮಾರ್ಪಾಟಿಗೆ ತಕ್ಕಂತೆ ದೇಹಾಲಂಕಾರವನ್ನು ಮಾನ್ಯಮಾಡಿ ಅದರಜೊತೆಗೇ ಪಾವಿತ್ರ್ಯವನ್ನು ಸಾಧಿಸುವ ಉಪಾಯವನ್ನು ತಳಿಕೆ ಹಾಕುವಲ್ಲಿ ಯಶಸ್ವಿಯಾಗಿದ್ದಾರೆ.

ದೇಹಾಲಂಕಾರದಿಂದ ಮುಖಕ್ಕೆ ಮತ್ತು ದೇಹಕ್ಕೆ ವಿಶೇಷವಾದ ಸೌಂದರ್ಯ, ಹಾಗೂ ಅಪೂರ್ವವಾದ ಶೋಭೆಯನ್ನು ಕೊಡುತ್ತದೆ. ಇದು ಒಬ್ಬ ವ್ಯಕ್ತಿಯ ಪ್ರತಿಷ್ಠೆ, ಗಾಂಭೀರ್ಯವನ್ನು ಹೆಚ್ಚಿಸಲೂ ಸಹಕಾರಿ.

ನೀರಿಗೆ ನೈದಿಲೆ ಶೃಂಗಾರ
ನಾರಿಗೆ ಗುಣವೇ ಶೃಂಗಾರ
ಸಾಗರಕೆ ನೊರೆ ತೊರೆಗಳೇ ಶೃಂಗಾರ
ಗಗನಕೆ ಚಂದ್ರಮನೇ ಶೃಂಗಾರ
ನಮ್ಮ ಕೂಡಲ ಸಂಗಮ ಬಸವನ
ಶರಣರ ನೊಸಲಿಗೆ ವಿಭೂತಿಯೇ ಶೃಂಗಾರ

ಎಂಬುದಾಗಿ ಬಸವಣ್ಣನವರು ನುಡಿದಂತೆ ನೀರಿಗೆ, ನಾರಿಗೆ, ಸಾಗರಕೆ, ಗಗನಕ್ಕೆ ಶೋಭೆ ತರಲು ಅದರದೇ ಆದ ಗುಣಗಳು ಪೂರಕವಾಗಿರುವಂತೆ ಶರಣರ ನೊಸಲಿಗೆ ಶೋಭೆತರುವ ವಿಭೂತಿಯು ಸಾತ್ವಿಕ ಜೀವನದ ಸಂಕೇತವೂ ಹೌದು.

ಕೇಯೂರಾನ ವಿಭೂಷಯಂತಿ ಪುರುಷನ್
ಹಾರಾನ್ನ ಚಂದ್ರೋದಯಾ
ನ ಸ್ನಾನಂ ನವಿಲೇಪನಾನಿ ಕುಸುಮಮ್
ಆಲಂಕೃತಾನಿ ಮೂರ್ಧಜಾಃ
ವಾಣ್ಯೇಕ ಸಮಲಂ ಕರೋತಿ ಪುರುಷಂ
ಯಾ ಸಂಸ್ಕೃತಾಧಾರ್ಯತೇ
ಕ್ಷೀಯಂತೇಖಲು ಭೂಷಣಾದಿ
ಸತತಂ ವಾಗ್ಭೂಷಣಂ ಭೂಷಣಂ

ಯಾವ ಅಲಂಕಾರಗಳೂ ಮನುಷ್ಯನಿಗೆ ದೊಡ್ಡಸ್ಥಿಕೆಯನ್ನು ತಾರದು ಎನ್ನುವಂತೆ ಉಪಾಸನೆಯಲ್ಲಿ ದೇಹ, ವಾಣಿ, ಮನಸ್ಸು ಇವು ಮೂರೂ ಪಾಲುಗೊಳ್ಳಬೇಕು. ಆಗ ಗಂಧ, ಚಂದನ, ಭಸ್ಮ ಮುಂತಾದ ವಸ್ತುಗಳನ್ನು ಧರಿಸುವುದರಿಂದ ಶರೀರವು ಮೊದಲು ಪವಿತ್ರವಾಗಿ ಸ್ತುತಿ, ಮಂತ್ರಪಠಣದಿಂದ ಮಾತು ಪವಿತ್ರವಾಗಿ ಮನಸ್ಸು ಧ್ಯಾನದಿಂದ ಪ್ರಸನ್ನವದನವಾಗುತ್ತದೆ.

ದೇಹಾಲಂಕಾರ ಮಾಡಿಕೊಳ್ಳುವಾಗ ನಾವು ಧರಿಸುವ ಬಟ್ಟೆ, ಧರಿಸುವ ಭಸ್ಮಗಳು ಅಲಂಕಾರಕ್ಕಾಗಿಯಾಗಲಿ, ಜಾತಿ ಸೂಚಕಕ್ಕಾಗಲಿ ಎಂಬ ಭಾವನೆ ಬಾರದೆ ಈ ಶರೀರವೆಂಬುದು ನನ್ನದಲ್ಲ. ಇದನ್ನು ಪೋಷಿಸುತ್ತಿರುವ ಆ ಭಗವಂತನದು ಆ ಭಗವಂತನ ಸೇವೆಗೆ ಈ ದೇಹ ಮೀಸಲು - ಎಂಬ ವಿನಮ್ರ ಸಮರ್ಪಣಾಭಾವ ನಮಗೆ ಬರಬೇಕೇಹೊರತು ಡಂಭಾಚಾರಕ್ಕಾಗಲಿ; ತೋರಿಕೆಗಾಗಲಿ ಧರಿಸುವುದೆಂಬ ಭಾವನೆಯನ್ನು ಮೊದಲು ಬಿಡಬೇಕು.

## ಲಾಂಛನ

ಒಂದು ಸಂಘ ಅಥವಾ ಸಂಸ್ಥೆ, ರಾಷ್ಟ್ರಕ್ಕೆ ತನ್ನದೇ ಆದ ಲಾಂಛನ ವಿರುವಂತೆ ನಮ್ಮ ದೇಹಕ್ಕೆ ಅಲಂಕಾರ, ಶ್ರದ್ಧೆ, ಪಾವಿತ್ರ ಮತ್ತು ದೇಹವೇದೇವಾಲಯವನ್ನಾಗಿ ಮಾರ್ಪಡಿಸುವ ವಿಭೂತಿ (ಭಸ್ಮ) ಮೃತ್ತಿಕೆ, ತ್ರಿಚೂರ್ಣ, ಗೋಪಿಚಂದನ ಮುಂತಾದ ಮಂಗಲವಸ್ತುಗಳನ್ನು, ಧಾರಣೆಯನ್ನು ಯಾರೂ ಅಗೌರವಾಗಿಯಾಗಲೀ, ನೋಡಿದವರು ಗೇಲಿಮಾಡುತ್ತಾರೆಂದಾಗಲೀ ಸಂಕುಚಿತ ಭಾವನೆ ತಾಳದೆ ಗೌರವಿಸಬೇಕು ಮತ್ತು ಆಚರಿಸಬೇಕು. ಆಗಲೇ ಆರ್ಯಸಂಸ್ಕೃತಿಯ ತಳಪಾಯ ಭದ್ರವಾಗಿರಲು ಸಾಧ್ಯ.

## ಭಸ್ಮಧಾರಣೆಯ ವಿಧಾನ

ಸಾಮಾನ್ಯವಾಗಿ ಹುಬ್ಬಿನ ಮಧ್ಯೆ ಅಥವಾ ಸ್ವಲ್ಪ ಮೇಲೆ ಹಾಗೂ ನಡುಹಣೆಗೆ, ಕುಂಕುಮ, ತಿಲಕ, ಗಂಧಲೇಪನ, ಚಂದನ ಬೊಟ್ಟು, ವಿಭೂತಿ ಧರಿಸುವುದು ಸನಾತನ ಸಂಸ್ಕೃತಿಯಲ್ಲೊಂದಾಗಿದೆ.

ರುಂಡ, ಮುಂಡ, ಕೈಕಾಲು ಎಂಬುದಾಗಿ ಈ ದೇಹವನ್ನು ಮೂರು ಭಾಗವಾಗಿ ವಿಂಗಡಿಸಿದಾಗ ರುಂಡವೇ ಪ್ರಧಾನ. ಶರೀರದ ಕೇಂದ್ರಬಿಂದು ಮಿದುಳು ತಲೆಯಲ್ಲಿದೆ. ಇವೆಲ್ಲಕ್ಕೂ ಸಂಚಾಲಕ ಶಕ್ತಿ ಭ್ರೂಮಧ್ಯದಲ್ಲಿದೆ. ಇಂಥ ಭ್ರೂಮಧ್ಯ ಸ್ಥಲದಲ್ಲಿ ಹಣೆಗೇ ಪ್ರಾಧಾನ್ಯ, ಮೆದುಳಿಗೆ ಬೇಕಾಗುವ ಶಾಖ ಶಕ್ತಿಯನ್ನು ಸಂಗ್ರಹಿಸುವುದೇ ಈ ಹಣೆ. ಇಂಥ ಹಣೆಯನ್ನು ಸದಾ ತಂಪಾಗಿರುವ ತಾಣವನ್ನಾಗಿ ನೋಡಿಕೊಳ್ಳಬೇಕು. ಈ ಕಾರಣದಿಂದಲೇ ಅರಿವಿಲ್ಲದೇ ಅಲಂಕಾರದ್ರವ್ಯಗಳನ್ನು ಬಳಸುತ್ತೇವೆ. ಈ ದ್ರವ್ಯಗಳಲ್ಲಿ ಔಷಧಿ ಗುಣಗಳೂ ಇವೆ. ಅಷ್ಟೇ ಅಲ್ಲದೆ ರೋಗ ವಿರೋಧಕ ಶಕ್ತಿಯೂ ಇವೆ.

ವೈಖಾನಸ ಸೂತ್ರದಲ್ಲಿ ಹಣೆಗೆ ಏನಾದರೂ ಇಡಲೇಬೇಕು. ಇಲ್ಲವಾದರೆ--

"ಯೋಗೋಧ್ಯಾನಂ ತಪ್ಪೋ ಹೋಮಃ
ಸ್ವಾಧ್ಯಾಯಃ ಪಿತೃತರ್ಪಣಂ
ಭಸ್ಮೀಂಭವತಿ ತತ್ಸರ್ವಂ
ಊರ್ಧ್ವ ಪುಂಡ್ರ ವಿನಾಕೃತಂ
ಊರ್ಧ್ವ ಪುಂಡ್ರ ವಿಹೀನಸ್ಯ
ಸ್ಮಶಾನಸದೃಶಂ ಮುಖಂ"

ಯೋಗ, ವೇದಾಧ್ಯಯನ, ತಪಸ್ಸು, ಧ್ಯಾನ, ಪಿತೃತರ್ಪಣಗಳನ್ನು ಊರ್ಧ್ವಪುಂಡ್ರಗಳಿಲ್ಲದೆ ನಡೆಸಿದರೆ

ಅವು ವ್ಯರ್ಥ, ಊರ್ಧ್ವ ಪುಂಡ್ರವಿಲ್ಲದೆ ಮುಖ ಸ್ಮಶಾನ ಸದೃಶವಾಗಿರುತ್ತದೆ. ಮಾಡಿದ ಕಾರ್ಯ ನಿಷ್ಫಲವಾಗುತ್ತದೆ ಎಂದಿದೆ.

ಅಂತೆಯೇ ಪಾದ್ಮತಂತ್ರದಲ್ಲಿ ದೇವರಿಗೂ ಕೂಡ ಹಣೆಗೆ--

ಲಲಾಟೇ ತಿಲಕಂ ಸೌಮ್ಯಂ
ದೀಪವತ್‌ಶ್ವೇತ ಮತ್ನಯಾ

ಬಿಳಿಯ ಮಣ್ಣಿನಿಂದ ದೀಪಾಕಾರವಾಗಿ ಕಣ್ಣಿಗೆ ಹಿತವಾಗುವಂತೆ ತಿಲಕವನ್ನು ಇಡಬೇಕು ಎಂದಿದೆ.

ನಾರೀ ಸೌಂದರ್ಯಕ್ಕೆ ಶೋಭೆತರುವ ಕುಂಕುಮ ದೊಟ್ಟು ರೂಪಾಯಿ ಅಗಲದಿಂದ ಗುಲಗುಂಜಿ ಗಾತ್ರದವರೆಗೆ ಹಚ್ಚಿಕೊಂಡರೆ, ಅದರದೇ ಆದ ಶೋಭೆ ಬರುವಂತೆ ಮುತ್ತೈದೆತನಕ್ಕೂ ಶುಭ ತರುವುದು. ಅಂತೆಯೇ ಮೂರು ಪಟ್ಟೆಗಳಂತೆ ಬೆಳ್ಳನೆ ಮಿರುಗುವ ವಿಭೂತಿ ಪುರುಷರ ಹಣೆಗೆ ಗಾಂಭೀರ್ಯವನ್ನು ಹೆಚ್ಚಿಸುತ್ತದೆ. ವಿಷ್ಣುಪಾದದ ನೆನಪು ತರುವ ಉದ್ದನೆಯ ಗೆರೆಗಳುಳ್ಳ ತ್ರಿಪುಂಡ್ರ ಉಜ್ವಲ ಧಾರ್ಮಿಕತೆಯ ಸಂಕೇತವಾಗಿ ರಾಜಿಸುವುದರಲ್ಲಿ ಸಂಶಯವಿಲ್ಲ. ಒಟ್ಟಿನಲ್ಲಿ ಎಲ್ಲವೂ ಸದ್‌ಭಾವನೆಯ ಸಂಕೇತಗಳು ಸರಿ.

ಮುಖ ನೋಡಿ ಮಣೆಹಾಕು ಎನ್ನುವಂತೆ ಹಣೆ ನೋಡಿ ಊಟ ಹಾಗುವವರೂ ಇದ್ದಾರೆ. ಹಣೆಯ ಮೇಲಿನ ವಿಭೂತಿಪಟ್ಟೆ, ತ್ರಿಪುಂಡ್ರ, ತ್ರಿನಾಮ ಎಲ್ಲವೂ ದ್ವೈತ, ಅದ್ವೈತ, ವಿಶಿಷ್ಟಾದ್ವೈತ ಮತಗಳ ಚಿಹ್ನೆಗಳನ್ನು ನೆನಪಿಸುತ್ತವೆ.

ಭಸ್ಮಕ್ಕೆ ಸಾವಿರಾರು ವರ್ಷಗಳ ಪರಂಪರೆ ಇದೆ. ಋಷಿ ಮುನಿಗಳು, ಸಾಧುಸಂತರು ಬ್ರಹ್ಮಚಾರಿ, ಗೃಹಸ್ಥರು ಹಾಗೂ ಸಜ್ಜನರು ಅವರವರ ಭಾವನೆ, ಭಕುತಿಗೆ ತಕ್ಕಂತೆ ಹಣೆಯ ಮೇಲೆ ಲಾಂಛನವನ್ನು ಧರಿಸುತ್ತಾರೆ.

ಭಸ್ಮವನ್ನು ವಿಭೂತಿ, ಭಸಿತ, ಭಸ್ಮ, ಕ್ಷಾರ, ರಕ್ಷೆ ಎಂಬ ಪಂಚನಾಮದಿಂದ ಗುರುತಿಸುತ್ತಾರೆ.

ಭಸ್ಮದಲ್ಲಿ ಔಷಧಿಗುಣಗಳೂ ಇವೆ. ದೇಹದ ಉಷ್ಣಾಂಶವನ್ನು ಹೊರಕ್ಕೆ ಬಿಡುವುದಿಲ್ಲ. ಹೊರಗಿನ ತೇವಾಂಶವನ್ನು ದೇಹದೊಳಕ್ಕೆ ಪ್ರವೇಶಿಸದಂತೆ ನಿಗ್ರಹಿಸುತ್ತದೆ. ಆದ್ದರಿಂದ ಸಂಧ್ಯಾವಂದನೆ ಮಾಡುವಾಗ ಭಸ್ಮವನ್ನು ಕೈಯಲ್ಲಿ ತೆಗೆದುಕೊಂಡು "ಈಶಾನ ತತ್ಪುರುಷ ಅಘೋರ ವಾಮದೇವ ಸದ್ಯೋಜಾತವೆಂಬ ಪಂಚಬ್ರಹ್ಮಮಂತ್ರದಿಂದ ಅಭಿಮಂತ್ರಿಸಿ "ಮಾನ ಸೂಕ್ತೇ" ಮಂತ್ರದಿಂದ ಮಧ್ಯಮಾ ಅನಾಮಿಕಾ ಅಂಗುಷ್ಠಬೆರಳುಗಳ ಮೂಲಕ ತೆಗೆದುಕೊಂಡು ಆಮಂತ್ರಕವಾಗಿ ನೀರಿನಿಂದ ಮರ್ಧಿಸಿ "ತ್ರಿಯಾಯುಷಂ" ಎಂಬ ಮಂತ್ರದಿಂದ

ಲಲಾಟೇ ಹೃದಿ ದೋರ್ದ್ವಂದ್ವೇ
ಗಲೇ ಕುಕ್ಷೌಶಿರಸ್ಯಥ
ಧಾರಯೇದ್ಭಸಿತಂ ಭಸ್ಮ
ದ್ವಿಜೋ ನಿತ್ಯ ಮತಂದ್ರಿತಃ

ಅಂದರೆ ಹಣೆ, ಹೃದಯ, ಕೈಗಳೆರಡು ಕುತ್ತಿಗೆ ಹೊಟ್ಟೆ, ಶಿರಸ್ಸು ಇವಿಷ್ಟು ಕಡೆ ತಪ್ಪದೆ ಬೋಧಾಯನಃ ತ್ರಿಪುಂಡ್ರ ಧರಿಸಬೇಕು. ಅದ್ವೈತಿಗಳು ಉಪನಯನ ಕಾಲದಲ್ಲಿ ವಿಭೂತಿಯನ್ನು ಅಡ್ಡ ಪಟ್ಟೆ ಹಾಕಿಸುತ್ತಾರೆ. ಬೋಧಾಯನಾಚಾರ್ಯರು ಬ್ರಹ್ಮಚಾರಿಯ ಭಸ್ಮಧಾರಣೆಯನ್ನು ಬೇರೆತರನಾಗಿ ಹೇಳಿದ್ದಾರೆ. ಯಾವ ಅಗ್ನಿಯಲ್ಲಿ ನಿತ್ಯಕರ್ಮ ಮಾಡುವರೋ ಆ ಭಸ್ಮವನ್ನೆ ತೆಗೆದುಕೊಂಡು ಮೇಧಾ, ತೇಜಸ್ಸು, ವರ್ಚಸ್ಸು, ಆಯಸ್ಸು ಎಲ್ಲವನ್ನು ಕೊಡೆಂದು ಬೇಡಬೇಕೆಂದಿದ್ದಾರೆ. ಉಪನಯನ ಆಗದ ಮಕ್ಕಳು ಬೆಳಗ್ಗೆ, ಸಾಯಂಕಾಲ ಭಸ್ಮವನ್ನು ಹಚ್ಚುವಾಗ-

ತ್ರ್ಯಯಂಬಕಂ ಯಜಾಮಹೇ
ಸುಗಂಧಿಂ ಪುಷ್ಟಿವರ್ಧನಮ್...............

ಎಂಬ ಮಂತ್ರ ಉಚ್ಚರಿಸಿ ಉದ್ದಕ್ಕೆ ಭಸ್ಮ ಹಚ್ಚಬೇಕು.

ಚಳಿಪ್ರದೇಶದಲ್ಲಿ ಚಳಿಯಿಂದ ರಕ್ಷಣೆ ಹೊಂದಲು ಸಾಧು ಸಂತರು ಮೈತುಂಬಾ ಭಸ್ಮಧರಿಸಿರುತ್ತಾರೆ. ಭಸ್ಮಲೇಪನದಿಂದ ಶರೀರವನ್ನು ಶುದ್ಧಿಮಾಡಿ ಬಲಗೊಳಿಸಿ, ನರಮಂಡಲವನ್ನು ಚುರುಕುಗೊಳಿಸುತ್ತದೆ. ದುಷ್ಟಶಕ್ತಿ ದೂರಮಾಡಿ ಶುಭದೃಷ್ಟಿಯನ್ನು ಕರುಣಿಸುತ್ತದೆ. ಭಸ್ಮಧಾರಣೆಯಿಂದ ಜ್ವರ, ಕೆಮ್ಮ ಮೈತುರಿಕೆ, ಮೊಡವೆ, ವಿಷಜಂತುಗಳ ಕಡಿತ, ಮೈಮೇಲೆ ಗಂಧೆಗಳೇಳುವುದನ್ನು ನಿಯಂತ್ರಿಸಬಹುದು. ಮೈಕೈ ತಣ್ಣಗಾದಾಗ ಅಂದರೆ ದೇಹದ ಉಷ್ಣತೆ ತಗ್ಗಿ ತಣ್ಣಗಾದಾಗ ಕಾಲಿಗೆ ಭಸ್ಮ ಉಜ್ಜುತ್ತಾರೆ. ಉಜ್ಜಿದಾಗ ನರನಾಡಿಗಳಿಗೆ ಜೀವ ಸಂಚಾರವಾಗಿ ಉಷ್ಣತೆ ಏರಿ ಎಚ್ಚರಗೊಳ್ಳುವರು.

ಏಕಪುಂಡ್ರೇ ಮಾನಹಾನಿ
ದ್ವಿಪುಂಡ್ರೇ ಜಪನಿಷ್ಫಲಂ
ತ್ರಿಪುಂಡ್ರೇ ಮೋಕ್ಷಮಾಪ್ನೋತಿ
ಇತಿ ಭಸ್ಮಧಾರಣ ಲಕ್ಷಣಮ್

ಎಂದರೆ ಮೂರು ಎಳೆ ಭಸ್ಮಧಾರಣವು ಅಪೇಕ್ಷಣೀಯ ಎಂಬುದು ಇದರಿಂದ ವ್ಯಕ್ತವಾಗುತ್ತದೆ.

ಈಶ್ವರನಿಗಂತೂ ಮಸಣದ ಬೂದಿಯೇ ಭೂಷಣ. ಕಾಶಿ ವಿಶ್ವನಾಥನಿಗೆ ಪೂಜೆಗೆ ಭಸ್ಮಬೇಕೇಬೇಕು.

ಬೃಹಜ್ಜಾಬಾಲೋಪನಿಷತ್ತಿನಲ್ಲಿ ಭಸ್ಮದ ಮಹತ್ವ ತಿಳಿಸಿದೆ. ಜಾಬಾಲಿ ಸೂತ್ರದಂತೆ ಮುತ್ತುಗದ ಎಲೆಯಲ್ಲಿ ಸಗಣಿಯನ್ನು ಕೆಳಗೆ ಬೀಳದಂತೆ ಹಿಡಿದುಕೊಂಡು ಅದೇ ಎಲೆ ಮೇಲೆ ತಟ್ಟಿ ಒಣಗಿಸಿ, ಒಣಗಿದಾಗ ಹಸುವಿನ ಗಂಜಲದಲ್ಲಿ ಚೆನ್ನಾಗಿ ಕಲೆಸಿ ಉಂಡೆ ಮಾಡಿ ಬಿಸಿಲಿನಲ್ಲಿ ಒಣಗಿಸುತ್ತಾರೆ. ಒಣ ಪುರುಳೆಯನ್ನು ಸುಟ್ಟು ನೀರಿನಲ್ಲಿ ಕರಗಿಸಿ ಸ್ವಲ್ಪ ಹೊತ್ತು ಹಾಗೇ ಬಿಟ್ಟರೆ ತಳದಲ್ಲಿ ಗಟ್ಟಿಗಂಧ ಉಳಿದಿರುತ್ತದೆ. ಅದನ್ನು ಪುನಃ ತಟ್ಟಿಮತ್ತೆ ಒಂದೆರಡು ಬಿಸಿಲಿಗೆ ಹಾಕಿ ಒಣಗಿಸಿಡುತ್ತಾರೆ. ಇದು ಋಷಿಮುನಿಗಳು ತಯಾರಿಸುವ ಕ್ರಮವಾದರೆ ಶ್ರೀಸಾಮಾನ್ಯರು ಕೈಕಸುಬಾಗಿಯೇ ತಯಾರಿಸುವ ವಿಧಾನವೇಬೇರೆ.

"ಸಣ್ಣಕುಡಿಕೆಯಲ್ಲಿ ಅನ್ನಮಾಡಿದರೆ ಸಾವಿರ ಜನ ಊಟಮಾಡಿದರೂ ಇನ್ನು ಉಳಿಯುತ್ತದೆ" ಎನ್ನುವ ಜಾನಪದ ಗಾದೆಯಂತ ಭಸ್ಮದ ವಿಸ್ಮಯವಿಶೇಷವಾದುದು.

ಭಸ್ಮದ ಮೂಲದ್ರವ್ಯಸಗಣಿ. ಕರು ಇದ್ದು ಹಾಲು ಕೊಡುವ ಹಸುವಿನ ಸಗಣಿ ಬಹಳಶ್ರೇಷ್ಠ. ಉತ್ತರಾಯಣಕಾಲದ ಪುಷ್ಯಮಾಸದ ಗುರುವಾರ ಅಥವಾ ಭಾನುವಾರ ಭಸ್ಮ ತಯಾರಿಗೆ ಶ್ರೇಷ್ಠವಾದ ದಿನ. ಇನ್ನು ಕೆಲವರು ಶಿವರಾತ್ರೆಯ ಅಮವಾಸ್ಯೆ ಸೋಮವಾರ ಉಂಡೆ ತಯಾರಿಸಲು ಶುಭದಿನವೆಂದು ಆ ದಿನವೇ ಸಗಣಿಯನ್ನು ಸಂಗ್ರಹಿಸುತ್ತಾರೆ. ಆ ಸಗಣಿಯನ್ನು ಅದೇ ಹಸುವಿನ ಗಂಜಲ (ಗೋಮೂತ್ರ) ದಲ್ಲಿ ನೆನಸಿ ಉಂಡೆ ಅಥವಾ ಕುರುಳು ತಟ್ಟಿ ಹದಿನೈದು ದಿನ ಬಿಸಿಲಿಗೆ ಒಣಗಿಸಿ, ಪೇರಿಸಿಟ್ಟು ಭತ್ತದ ಹೊಟ್ಟಿನಿಂದ ಮುಚ್ಚುತ್ತಾರೆ. ಅದಕ್ಕೆ ಜೇನು ತುಪ್ಪ, ತುಪ್ಪ, ಹಾಲು, ಮೊಸರನ್ನು ಹಾಕಿ ಉರಿ ಹಾಕುತ್ತಾರೆ. ಇದರಿಂದ ಬತ್ತದ ಹೊಟ್ಟು ನಿಧಾನವಾಗಿ ಉರಿದು ಬೂದಿ ಉಳಿಯುತ್ತದೆ. ಈ ಬೂದಿಯನ್ನು ಹೊರತೆಗೆದು ಶುದ್ಧವಾದ ನೀರಿನಿಂದ ಏಳು ಬಾರಿ ತೊಳೆದು ಗಂಧ, ಚಂದನ, ಲಾವಂಚ ಪಚ್ಚ ಕರ್ಪೂರ ಹಾಗೂ ಜಾಯಿಕಾಯಿ ಮುಂತಾದ ಔಷಧೀಯ ಗುಣಗಳುಳ್ಳ ವನಸ್ಪತಿಗಳನ್ನು ಸೇರಿಸಿ ನೀರಿನಲ್ಲಿ ಕದಡಿ ಮಣ್ಣಿನ ಪಾತ್ರೆಯಲ್ಲಿಟ್ಟು ಬಾಯಿಕಟ್ಟಿಡಬೇಕು. ಒಂದು ವಾರದ ನಂತರ ಪಾತ್ರೆಯಲ್ಲಿ ಅಂಟಿನತರದ ದ್ರವ್ಯ ನಿಂತಿರುತ್ತದೆ. ಇದನ್ನು ನಮಗೆ ಬೇಕಾದ ಆಕಾರದಲ್ಲಿ ಬೆಣ್ಣೆಯಿಂದ ಉಂಡೆಕಟ್ಟಿ ಪುನಃ ಒಂದೆರಡು ಬಿಸಿಲಿನಲ್ಲಿ ಒಣಗಿಸಿ ಬಾಳೆರ ವದಿಯಲ್ಲಿ ಭದ್ರವಾಗಿ ಕಟ್ಟಿಟ್ಟರೆ ಬಹಳ ಕಾಲ ಬರುವುದು. ಸಾಗಾಣಿಕೆಗೂ ಸುಲಭವಾಗುವುದು.

ಕೃಷ್ಣಭಕ್ತರಿಗೆ ಗೋಪಿ ಚಂದನ ಪ್ರಿಯವಾದುದು. ಶ್ರೀ ದ್ವಾರಕಾ ಕ್ಷೇತ್ರದಲ್ಲಿ ಗೋಪಿ ತಟಾಕವೆಂಬ ಸರೋವರದ ಬಳಿಸಿಗುವ ಈ ಪವಿತ್ರಮೃತ್ತಿಗೆ ಬಿಳಿ, ಹಳದಿ, ಹಾಗೂ ಬೇರೆ ಬೇರೆ ಬಣ್ಣಗಳಲ್ಲಿ ದೊರೆಯುತ್ತದೆ. ಬಣ್ಣದಲ್ಲಿ ವಿಧ ವೈವಿಧ್ಯವಿದ್ದರೂ ಹಳದಿ ಬಣ್ಣಕ್ಕೆ ಪ್ರಾಶಸ್ತ್ಯ. ಈ ಮೃತ್ತಿಕೆಯನ್ನು ಅಗೆದು ಕಲ್ಲು, ಹೆಂಟೆಗಳನ್ನು ಆರಿಸಿಸುವಾಸನಾಯುಕ್ತವಾದ ಮಣ್ಣನ್ನು ಶುಭ್ರವಾದ ನೀರಿನಿಂದ ತೊಳೆದು ಉಂಡೆ ಮಾಡಿ ಬಿಸಿಲಿನಲ್ಲಿಟ್ಟು ಒಣಗಿಸುತ್ತಾರೆ. ಗೋಪಿ ಚಂದನ ಒಗರು, ಸಿಹಿ ಹಾಗೂ ಸ್ವಲ್ಪಖಾರ ಯುಕ್ತವಾಗಿರುತ್ತದೆ. ಗೋಪಿ ಚಂದನವನ್ನು ದಾಹವಿಕಾರದಲ್ಲಿ - ಬಾಯಲ್ಲಿ ವ್ರಣವಾದಾಗ ಇದರ ಪುಡಿಯನ್ನು ನೀರಿನಲ್ಲಿ ಕದಡಿ ಕುಡಿಯಬೇಕು. ಎಲ್ಲಾ ಪಿತ್ತವಿಕಾರಗಳಿಗೂ ಇದರ ಬಳಕೆ ಉಪಯುಕ್ತ.

ಗೋಪಿ ಚಂದನ ಪಾಪಘ್ನಿ
ವಿಷ್ಣು ದೇಹ ಸಮುದ್ಭವ
ಚಕ್ರಾಂಕಿತ ನಮಸ್ತೇಸ್ತು
ಧಾರಣಾನ್ಮುಕ್ತಿ ದೋಭವ

ಎಂಬ ಶ್ಲೋಕ ಪಠಿಸುತ್ತಾ ಹಣೆ ಭುಜ, ಕೈಗಳಿಗೆಲ್ಲಾ ಲೇಪಿಸಿಕೊಳ್ಳುವರು.

ಇನ್ನು ತಿರುನಾಮಕ್ಕೆ ಬಳಸುವ ದ್ರವ್ಯ ಪವಿತ್ರ ಮಣ್ಣು. ಇಂಥ ಮಣ್ಣು ಪರ್ವತ, ನದೀತೀರ, ಗೆದ್ದಲು ಹುತ್ತ, ಸಾಗರದ ತೀರ, ತುಳಸೀಗಿಡದ ಬುಡ ಹಾಗೂ ತಿರುಪತಿ, ಬದರೀ, ಪ್ರಯಾಗ ಮುಂತಾದ ಯಾತ್ರಾಸ್ಥಳಗಳಲ್ಲಿ ಸಿಗುವ ಬೇರೆ ಬೇರೆ ಬಣ್ಣದ ಮಣ್ಣುಗಳನ್ನು ಶುದ್ಧಮಾಡಿ ಸಂಗ್ರಹಿಸಿ ತಿರುನಾಮಕ್ಕೆ ಬಳಸುವರು. ಇದರಲ್ಲಿ ಬಿಳಿ ಮೃತ್ತಿಕೆಯಿಂದ ಮುಕ್ತಿಯೆಂದೂ, ತುಳಸಿ ಮಣ್ಣು ಹರಿಗೆ ಪ್ರಿಯವೆಂದೂ ಹೇಳಲಾಗುತ್ತದೆ.

ತ್ರಿಚೂರ್ಣವೆಂದರೆ ಅರಿಶಿನದ ಪುಡಿ. ಇದಕ್ಕೆ ಬೇರೆ ಬೇರೆ ದ್ರವ್ಯಗಳನ್ನು ಸೇರಿಸಿ ಕೆಂಪು ಬಣ್ಣ, ಅಂಟಾಗಿರುವಿಕೆ, ಸುಗಂಧ ಬರುವ ಗುಣಗಳನ್ನು ಅಳವಡಿಸಲಾಗುತ್ತದೆ. ಕೃಷ್ಣಭಕ್ತರು ಊರ್ಧ್ವ ಪುಂಡ್ರಗಳನ್ನು ಮಧ್ಯೆ ಅವಕಾಶ ಇರುವಂತೆ ವಿಷ್ಣುಪಾದದ ಆಕಾರದಲ್ಲಿ ರಚಿಸಿದ ನಂತರ ಮಧ್ಯದಲ್ಲಿ ನೇರವಾಗಿ ಗೆರೆಯಾಗಿ ತ್ರಿಚೂರ್ಣ ಬಳಸುವರು. ಭಕ್ತ - ಭಗವಂತನ ನಡುವಿನ ಸ್ನೇಹ ಸೇತುವೆ ವಿಶಿಷ್ಟವಾದುದು. ಆ ಭಕ್ತನಿಗೆ ಭಗವಂತನನ್ನು ಹೇಗೆ ಅರ್ಚಿಸಲಿ? ಪೂಜಿಸಲಿ, ಮನದಣಿಯ ಸ್ತುತಿಸಲಿ ಎಂಬುದೇ ಸದಾಚಿಂತೆ. ಹೀಗೆ ನಾನಾ ವಿಧಾನದ ಉಪಾಸನಾ ಪದ್ಧತಿಗಳ ವೈವಿಧ್ಯದಿಂದಾಗಿ ತಮ್ಮ - ತಮ್ಮ ಪದ್ಧತಿಗಳನ್ನು ಆಚರಿಸಲು - ಗೌರವಿಸುವುದರ ಜೊತೆಗೆ ಇದರ ಅವಿಭಾಜ್ಯವಾದ ಅನಿವಾರ್ಯವಾದ ಹಾಗೂ ಪೂರಕವಾದ ಅಂಗವಾಗಿ ಬೇರೊಬ್ಬರ ಪದ್ಧತಿಯನ್ನು ಗೌರವಿಸುವುದು ಹಿಂದೂ ಸಂಸ್ಕೃತಿಯ ಲಕ್ಷಣ. ಒಟ್ಟಿನಲ್ಲಿ ಉಪಾಸನೆಯ ನಿಟ್ಟಿನಲ್ಲಿ ದೇಹಾಲಂಕಾರಕ್ಕೆ ಬಳಸುವ ದ್ರವ್ಯಗಳನ್ನು ಅದರ ಚಿಹ್ನೆಗಳನ್ನು ಅವಹೇಳನ ಮಾಡದೆ ಅವರವರ ಇಚ್ಛೆಗೆ ಬಿಡುವುದು ಹಿಂದೂ ಸಂಸ್ಕೃತಿಯ ಏಳ್ಗೆಗೆ, ಉಳಿವಿಗೆ ಪೂರಕವಾಗುತ್ತದೆಯೇ ಹೊರತು ಮಾರಕವಾಗುವುದಿಲ್ಲ.

ಓಂ ಸಹನಾಭವತು, ಸಹನೌಭುನಕ್ತು
ಸಹ ವೀರ್ಯಂ ಕರವಾವಹೈ
ತೇಜಸ್ವಿನಾ ವದೀತಮಸ್ತು
ಮಾ ವಿದ್ವಿಶಾವಹೈ
ಓಂ ಶಾಂತಿಃ ಶಾಂತಿಃ ಶಾಂತಿಃ

☆☆☆☆☆☆☆☆☆☆

# ಯಜ್ಞ ಹಾಗೂ ದಾನ

---ಎಚ್. ವಿ. ನರಸಿಂಹಮೂರ್ತಿ.

'ಹೋಮ' ಎಂಬ ಶಬ್ದಕ್ಕೆ ಪ್ರಸಿದ್ಧವಾದ ಪರ್ಯಾಯಪದ 'ಯಜ್ಞ'. 'ಯಜ' ಎಂಬ ಧಾತುವಿನಿಂದ ಬಂದ ಈ ಪದಕ್ಕೆ ಇರುವ ಅನೇಕ ಅರ್ಥಗಳಲ್ಲಿ 'ದೇವಪೂಜೆ' ಎಂಬ ಅರ್ಥವು ಮುಖ್ಯವಾದುದು. ಅದರಲ್ಲಿಯೂ ಅಗ್ನಿಯಲ್ಲಿ ಮಂತ್ರಪೂರ್ವಕವಾಗಿ ಹವಿಸ್ಸನ್ನು ಅರ್ಪಿಸುವ ಕ್ರಿಯೆಗೇ ಯಜ್ಞವೆಂಬ ರೂಢಿ ಇದೆ. ಇದರ ಮುಂದಿನ ಬೆಳವಣಿಗೆಯಾಗಿ ಯಜ್ಞದ ಸಾಮಾಜಿಕ ಮತ್ತು ಆಧ್ಯಾತ್ಮಿಕ ರೂಪಗಳು ಬಂದಿವೆ. ಯಾಗ, ಹವನ, ಸತ್ರ, ಕ್ರತು, ಇಷ್ಟಿ - ಮುಂತಾದ ವಿವಿಧ ವೈದಿಕ ಕ್ರಿಯೆಗಳಲ್ಲಿ ಸೂಕ್ಷ್ಮವಾದ ಭೇದಗಳಿದ್ದರೂ ಒಟ್ಟಿನಲ್ಲಿ ಇವನ್ನೆಲ್ಲ ಯಜ್ಞವೆಂದೇ ಸಾಮಾನ್ಯವಾಗಿ ಕರೆಯಬಹುದು.

ದೇವತೆಗಳು ಯಜ್ಞರೂಪಿಯಾದ ಪರಮಾತ್ಮನನ್ನು ಜ್ಞಾನ ಮತ್ತು ಕರ್ಮ ಎಂಬ ಎರಡು ಬಗೆಯ ಯಜ್ಞಗಳಿಂದ ಪೂಜೆಮಾಡಿದರು. ಯಜ್ಞದ ಫಲವಾಗಿ ತಾವು ಲೋಕದ ಧಾರಣೆ ಮಾಡುವ ಅಧಿಕಾರವನ್ನು ಗಳಿಸಿ ಪೂಜ್ಯರಾದರು. ಆಮೇಲೆ ಅವರು ಹಿಂದೆ ಯಜ್ಞಮಾಡಿದ ದೇವತೆಗಳು ಯಾವಸ್ಥಾನವನ್ನು ಹೊಂದಿದರೋ ಅಂತಹ ದುಃಖಲೇಶವೂ ಇಲ್ಲದ ಪರಮ ಸುಖರೂಪವಾದ ಸ್ಥಾನವನ್ನು ಹೊಂದಿದರು' (ಯಜ್ಞೇನ ಯಜ್ಞಮಯ ಜಂತದೇವಾಸ್ಥಾನಿ ಧರ್ಮಾಣಿ ಪ್ರಥಮಾನ್ಯಾಸನ್, ತೇಹ ನಾಶಂ ಮಣಿಮಾನಃ ಸಚಂತ ಯತ್ರಪೂರ್ವೇ ಸಾಧ್ಯಾಸ್ಸಂತಿದೇವಾಃ) - ಎಂದು ಋಗ್ವೇದವು ಹೇಳುತ್ತದೆ. ಯಜ್ಞದಲ್ಲಿ ಎಲ್ಲವೂ ನೆಲೆಗೊಂಡಿದೆ; ಆದ್ದರಿಂದ ತಿಳಿದವರು ಯಜ್ಞವನ್ನು ಶ್ರೇಷ್ಠವೆಂದು ಹೇಳುವರು. (ತೈತ್ತಿರೀಯಾರಣ್ಯಕ : 10-7-11) - ಎಂದು ಯಜುರ್ವೇದ ಯಜ್ಞದ ಮಹಿಮೆಯನ್ನು ಸಾರುತ್ತದೆ.

ಪ್ರಜಾಪತಿಯು ಪ್ರಜೆಗಳೊಡನೆ ಯಜ್ಞವನ್ನು ಸೃಷ್ಟಿಸಿ ಹೀಗೆ ಹೇಳಿದನು. ನೀವು ಈ ಯಜ್ಞಗಳಿಂದ ದೇವತೆಗಳನ್ನು ಆರಾಧಿಸಿ; ಇದು ನಿಮಗೆ ಇಷ್ಟಾರ್ಥಗಳನ್ನು ಸುರಿಸುವ ಕಾಮಧೇನು. ನೀವು ದೇವತೆಗಳನ್ನು ಪೂಜಿಸಿದಂತೆ ದೇವತೆಗಳು ಫಲನೀಡಿ ನಿಮ್ಮನ್ನು ಸಂತೋಷಗೊಳಿಸಲಿ. ಹೀಗೆ ಇಬ್ಬರೂ ಪರಮ ಶ್ರೇಯಸ್ಸನ್ನು ಹೊಂದಿರಿ. ದೇವತೆಗಳು ನೀಡುವ ಭೋಗವಸ್ತುಗಳನ್ನು ಕೃತಜ್ಞತೆಯಿಂದ ಅವರಿಗೆ ಅರ್ಪಿಸದೆ ಹಾಗೆಯೇ ಉಣ್ಣುವವನು ಕಳ್ಳನು. ಯಜ್ಞಮಾಡಿ ಉಳಿದ ಪ್ರಸಾದವನ್ನು ಉಣ್ಣುವವರು ಪಾಪಗಳನ್ನು ಕಳೆದುಕೊಳ್ಳುವರು. ಹೀಗೆ ಬ್ರಹ್ಮವು ಯಾವಾಗಲೂ ಯಜ್ಞದಲ್ಲಿ ನೆಲೆನಿಂತಿದೆ. ಯಜ್ಞಚಕ್ರವನ್ನು ಯಾರು ಅನುಸಂಸುವುದಿಲ್ಲವೇ ಅವನ ಆಯುಷ್ಯವ್ಯರ್ಥ (ಭ.ಗೀತೆ : ೩ - ೧೦ ರಿಂದ ೧೬) - ಎಂದು ಯಜ್ಞದ ರಹಸ್ಯವನ್ನು ವಿವರಿಸಿದೆ.

ಯಜ್ಞದ ಕಾಲ, ಮಂತ್ರ - ತಂತ್ರಗಳ ಸ್ವರೂಪ, ಪಾತ್ರೆ ಮತ್ತು ಉಪಕರಣಗಳ ಆಕಾರ, ಸಂಖ್ಯೆ ಮತ್ತು ಉಪಯೋಗ - ಮುಂತಾದ ನೂರಾರು ಕ್ಲಿಷ್ಟವಾದ ವಿವರಗಳನ್ನು ಚರ್ಚಿಸಿ ನಿರ್ಣಯಿಸಲು ಮೀಮಾಂಸಾಶಾಸ್ತ್ರ, ಶ್ರೌತಸೂತ್ರಗಳು - ಮುಂತಾದ ಸಾಹಿತ್ಯರಾಶಿಯೇ ಇದೆ. ಅಶ್ವಮೇಧ - ರಾಜಸೂಯಗಳಂತಹ ದೊಡ್ಡಯಜ್ಞಗಳಿಂದ ಹಿಡಿದು ನಿತ್ಯದ ಅಗ್ನಿಹೋತ್ರದ ವರೆಗೆ ನೂರಾರು ಬಗೆಯ ಯಜ್ಞಗಳಿವೆ. ವಿಶೇಷವಾದ ದ್ರವ್ಯ, ಸಂಪತ್ತು, ನೂರಾರುಮಂದಿ ವಿದ್ವಾಂಸರ ಸಹಕಾರ ಮತ್ತು ಬಗೆ - ಬಗೆಯಾದ ವಿಧಿ - ನಿಷೇಧಗಳ ಪಾಲನೆ - ಇವುಗಳೆಲ್ಲ ಬಹಳ ತೊಡಕಿನ ಸಂಗತಿಗಳು. ಇವುಗಳಿಗಿಂತ ಸುಲಭವಾದ - ಸರಳವಾದ ಯಜ್ಞಗಳೂ ಇವೆ. ಇವು ಐದು ಬಗೆ. ಬ್ರಹ್ಮಯಜ್ಞ, ದೇವಯಜ್ಞ, ಪಿತೃಯಜ್ಞ, ಮನುಷ್ಯಯಜ್ಞ ಮತ್ತು ಭೂತಯಜ್ಞ. ಈ ಐದು ಬಗೆಯ ಯಜ್ಞಗಳು ಸರಳು; ಸುಲಭ, ಹೆಚ್ಚುಕಾಲ, ಹೆಚ್ಚು ದ್ರವ್ಯ, ಹೆಚ್ಚು ಜ್ಞಾನ ಮತ್ತು ಶ್ರಮಗಳು ಇವಕ್ಕೆ ಬೇಕಿಲ್ಲ. ಹೇಗಿದ್ದರೂ ಇವುಗಳ ಫಲವು ಹಿರಿದಾದ ಕಾರಣ ಇವು ಮಹಾಯಜ್ಞಗಳೆನಿಸಿವೆ.

ಯಜ್ಞದಿಂದ ಅದೃಷ್ಟರಾದ ದೇವತೆಗಳನ್ನು ಒಲಿಸಿಕೊಂಡು ಅವರಿಂದ ಕಾಣುವ ಫಲಗಳನ್ನು ವರವಾಗಿ ಪಡೆಯಬಹುದೆಂಬುದು ಯಜ್ಞದ ಒಂದು ಮುಖ. ಈ ನಂಬಿಕೆ ಇರಲಿ, ಇಲ್ಲದಿರಲಿ; ಯಜ್ಞವನ್ನು ವಸ್ತುನಿಷ್ಠವಾಗಿ ವೈಜ್ಞಾನಿಕ ಪರೀಕ್ಷೆಗಳಿಗೆ ಗುರಿಪಡಿಸಿ, ಅದರಿಂದ ಪ್ರಯೋಜನಗಳಿವೆಯೇ, ಇಲ್ಲವೇ ಎಂದು ಪ್ರಾಯೋಗಿಕವಾಗಿ ನಿರ್ಧರಿಸುವುದು ಇನ್ನೊಂದು ಮುಖ. ಇಂತಹ ಪರೀಕ್ಷೆಗಳು ಈಗ ಹೆಚ್ಚು ಹೆಚ್ಚಾಗಿ ಪಾಶ್ಚಾತ್ಯದೇವತೆಗಳಲ್ಲಿ ನಡೆಯುತ್ತಿವೆ. ಬೆಳಿಗ್ಗೆ ಮತ್ತು ಸಂಜೆ ಸೂರ್ಯನು ಹುಟ್ಟುವ ಮತ್ತು ಮುಳುಗುವ ಸಮಯಗಳಿಗೆ ಸರಿಯಾಗಿ ಹಸುವಿನ ತುಪ್ಪ, ಅಕ್ಕಿಕಾಳು -- ಮುಂತಾದ ವಸ್ತುಗಳನ್ನು ಗೋಮಯದ ಬೆರಣಿ ಮತ್ತು ಅರಳಿ ಮುಂತಾದ ಕಟ್ಟಿಗೆಗಳ ಬೆಂಕಿಯಲ್ಲಿ ಹೋಮಿಸಿ, ಅದರಿಂದ ಹೊರಡುವ ಧೂಮವನ್ನೂ ರಾಸಾಯನಿಕ ಮತ್ತು ಜೀವವೈಜ್ಞಾನಿಕ ಪರೀಕ್ಷೆಗಳಿಗೆ ಗುರಿಮಾಡಲಾಗಿದೆ. ಇವು ವಾತಾವರಣದಲ್ಲಿರುವ ಸೂಕ್ಷ್ಮವಾದ ರೋಗಾಣುಗಳನ್ನು ಸಮರ್ಥವಾಗಿ ಮತ್ತು ತೀವ್ರವಾಗಿ ನಾಶಮಾಡುತ್ತವೆ - ಎಂಬ ಫಲಿತಾಂಶ ಬಂದಿದೆ. ಸುತ್ತ - ಮುತ್ತ ಇರುವ ಸಸ್ಯಗಳ ಮತ್ತು ಪ್ರಾಣಿಗಳ ಮೇಲೆ ಇದು ಒಳ್ಳೆಯ ಪರಿಣಾಮಗಳನ್ನು ಮಾಡುವುದೆಂದು ದೃಢಪಟ್ಟಿದೆ.

ಹೋಮದಲ್ಲಿ ಉಳಿದ ಬೂದಿಯನ್ನು ಬೀಜಸಂಸ್ಕಾರಕ್ಕೆ ಉಪಯೋಗಿಸಿದಾಗ ಬೀಜಗಳ ಗುಣವೃದ್ಧಿ ಹೊಂದಿ ಒಳ್ಳೆಯ ಸಸ್ಯ ಮತ್ತಷ್ಟು ಫಲಗಳು ಉಂಟಾಗಿವೆ. ಬೂದಿಯು ವಿವಿಧ ರೋಗಗಳಿಗೆ ಪರಿಣಾಮಕಾರಿಯಾದ ಔಷಧವೆಂದು ಪ್ರಯೋಗಗಳು ದೃಢಪಡಿಸಿವೆ. ಹೋಮಕಾಲದಲ್ಲಿ ತಪ್ಪದೆ ಎದುರಿಗೆ ಕುಳಿತುಕೊಳ್ಳುವ ವ್ಯಕ್ತಿಗಳ ಶರೀರ ಮತ್ತು ಮನಸ್ಸುಗಳ ಮೇಲೆ ಹೋಮಕುಂಡದಿಂದ ಹೊರಡುವ ತರಂಗಗಳು ಉಂಟುಮಾಡುವ ಸೂಕ್ಷ್ಮ ಪರಿಣಾಮಗಳನ್ನು ವೈಜ್ಞಾನಿಕ ಯಂತ್ರಗಳಿಂದ ಅಳೆಯಲಾಗಿದೆ. ಇವುಗಳಿಂದ ವಿಕಾರಗಳ ಉಪಶಮನವು ಸಾಧ್ಯವೆಂದು ಖಚಿತವಾಗಿದೆ. ಹೀಗಾಗಿ ಪಾಶ್ಚಾತ್ಯದೇಶಗಳಲ್ಲಿ ಹೋಮದ ಬಗ್ಗೆ ಆಸಕ್ತಿ ಹೆಚ್ಚಿ ಹೊಸ - ಹೊಸ ಪ್ರಯೋಗಗಳು ನಡೆಯುತ್ತಿವೆ. ಹೋಮಚಿಕಿತ್ಸಾವಿಧಿ (Homa - Therapy) ಎಂಬ ನೂತನ ವಿಧಾನವೇ ಬೆಳೆಯುತ್ತಿದೆ. ಪೂರ್ವಗ್ರಹವನ್ನು ಬಿಟ್ಟು ತೆರೆದ ಕಣ್ಣು ಮತ್ತು ಮನಸ್ಸುಗಳಿಂದ ಸಂದೇಹವಾದಿಗಳು ಮತ್ತು ನಾಸ್ತಿಕವಾದಿಗಳು ವಿಚಾರಮಾಡಲು ತೊಡಗಿದ್ದಾರೆ.

ಈ ಯಜ್ಞತತ್ತ್ವಕ್ಕೆ ಹೊರಗಿನ ಸ್ಥೂಲವಾದ ಕ್ರಿಯಾತ್ಮಕ ಮುಖವೊಂದು ಇರುವಂತೆ ಒಳಗಿನ ಸೂಕ್ಷ್ಮವಾದ ಆಧ್ಯಾತ್ಮಿಕ ಮುಖವೂ ಇದೆ. ಎಲ್ಲ ಬಗೆಯ ಕರ್ಮಗಳೂ ಯಜ್ಞವಾಗಿ ಪರಿವರ್ತನೆ ಹೊಂದುವ

ಸಾಧ್ಯತೆ ಇದೆ. ಪ್ರಕೃತಿ ಸಹಜವಾದ ಹಿಂದೊಂದು ಕರ್ಮವನ್ನೂ ಧರ್ಮ ಮತ್ತು ನೀತಿಯ ಕಟ್ಟುಗಳಿಗೆ ಒಳಪಡಿಸಿ, ಕಾಮ - ಕ್ರೋಧ - ಲೋಭ - ಮುಂತಾದ ಪ್ರೇರಣೆಗಳನ್ನು ನಿವಾರಿಸಿ, ವ್ಯಕ್ತಿಗೂ, ಸಮಾಜಕ್ಕೂ ಒಳಿತಾಗುವಂತೆ ನಿಯಂತ್ರಿಸಿ, ಅದನ್ನೇ ಉನ್ನತಮಟ್ಟದ ಆಧ್ಯಾತ್ಮಿಕ ದೃಷ್ಟಿಯಿಂದ ನಡೆಸಿದಾಗ, ಎಲ್ಲವೂ ಯಜ್ಞಮಯವೇ ಆಗುತ್ತದೆ. ಭಗವದ್ಗೀತೆಯ ನಾಲ್ಕನೇ ಅಧ್ಯಾಯದಲ್ಲಿ ಇಂತಹ ಆಧ್ಯಾತ್ಮಿಕಯಜ್ಞಗಳ ವಿವರಣೆ ಇದೆ. ದ್ರವ್ಯಯಜ್ಞಗಳಿಗಿಂತ ಈ ಬಗೆಯ ಯಜ್ಞಗಳೇ, ಶ್ರೇಷ್ಠ. ಏಕೆಂದರೆ ಎಲ್ಲ ಬಗೆಯ ಯಜ್ಞಗಳೂ ಕೊನೆಗೆ ಜ್ಞಾನವೆಂಬ ಫಲದಲ್ಲಿ ಪರಿಪೂರ್ಣತೆ ಹೊಂದುತ್ತವೆ - ಎನ್ನುತ್ತದೆ, ಭಗವದ್ಗೀತೆ.

ಆತ್ಮವನ್ನು ತಿಳಿದವನ ಬಾಳೆಲ್ಲವೂ ಪರಿಪೂರ್ಣವಾದ ಯಜ್ಞವೇ. ಹುಟ್ಟಿನಿಂದ ಸಾವಿನವರೆಗೆ ಜ್ಞಾನಿಯು ಏನೇ ಕರ್ಮ ಮಾಡಲಿ, ಅವೆಲ್ಲ ಹೊರನೋಟಕ್ಕೆ ಸಾಧಾರಣವಾದ ಜೈವಿಕ ಕ್ರಿಯೆಗಳಾಗಿ ತೋರಿದರೂ, ನಿಜವಾಗಿ ಅಂತರಾರ್ಥದಲ್ಲಿ ಯಜ್ಞಗಳೇ. ಮಹಾನಾರಾಯಣ ಮತ್ತು ಛಾಂದೋಗ್ಯ ಉಪನಿಷತ್ತುಗಳಲ್ಲಿ ಇಂತಹ ಪುರುಷಯಜ್ಞಗಳ ವಿವರ ಇದೆ. ಈ ಜೀವನ ಯಜ್ಞದ ಮುಖ್ಯಫಲ ಮುಕ್ತಿ; ಉಳಿದ ಪುರುಷಾರ್ಥಗಳು ಅಮುಖ್ಯಫಲಗಳು.

ಈಗಿನ ಕಾಲದ ಪರಿಸ್ಥಿತಿ ಮತ್ತು ಮನೋಧರ್ಮದಲ್ಲಿ ಯಜ್ಞದ ಸಾಮಾಜಿಕ ಮುಖದ ಕಡೆ ಗಮನ ಹರಿಸುವುದು ಅಗತ್ಯ; ನ್ಯಾಯ, ಮತ್ತು ಇಂದಿನ ಅವಶ್ಯಕತೆಯೂ ಹೌದು. ವ್ಯಕ್ತಿಗತವಾದ ಸ್ವಾರ್ಥದಿಂದ ಮೊದಲು ಮಾಡಿ, ಅಂತಿಮವಾಗಿ ಪರಮಾರ್ಥವನ್ನು ತಲುಪುವುದಕ್ಕೆ ಮಧ್ಯೆ, ಸಮಾಜಕ್ಕಾಗಿ ತನ್ನ ಎಲ್ಲವನ್ನೂ ಸಮರ್ಪಿಸುವ ಪರಾರ್ಥವು ಒಂದು ಸುದೀರ್ಘವಾದ ಹಂತವಾಗಿದೆ. ಸ್ವಂತಕಾಮನೆಗಳನ್ನು ತ್ಯಜಿಸಿ, ಸಮಾಜದ ಹಿತಕ್ಕಾಗಿ ಪ್ರಾಮಾಣಿಕವಾಗಿ ದುಡಿಯುವುದು ಶ್ರೇಷ್ಠವಾದ ಯಜ್ಞ. ಎಲ್ಲರೂ ಒಂದಲ್ಲ ಒಂದು ರೀತಿಯಿಂದ ಯಜ್ಞವನ್ನು ಆಚರಿಸಬಹುದು. ಹಾಗೆ ಆಚರಿಸಲೇ ಬೇಕು ಎಂಬುದು ನಮ್ಮ ಸನಾತನಧರ್ಮದ ಆದೇಶ.

ಯಜ್ಞದಂತೆ ದಾನವೂ ಸನಾತನ ಧರ್ಮದ ಒಂದು ಮುಖ್ಯವಾದ ಅಂಗ. 'ಯಜ್ಞೋ ದಾನಂ ತಪಶ್ಚೈವ ಪಾವನಾನಿ ಮನೀಷಿಣಾಮ್' - ಎನ್ನುತ್ತದೆ ಭಗವದ್ಗೀತೆ. ದಾನವು ವ್ಯಕ್ತಿಯ ಇಹಜೀವನದ ನೆಮ್ಮದಿಗೆ ಮತ್ತು ಸಮಾಜದ ಕ್ಷೇಮಕ್ಕೆ ಸಾಧನ. ಪರಲೋಕದ ಸುಖಕ್ಕೂ ಪರಮಪುರುಷಾರ್ಥವೆನಿಸಿದ ಮುಕ್ತಿಗೂ ಸೋಪಾನ.

ಶಂಕರ ಭಗವತ್ಪಾದರು ಗೀತಾ ಭಾಷ್ಯದಲ್ಲಿ 'ದಾನಂ ಯಥಾಶಕ್ತಿ ಸಂವಿಭಾಗಃ', 'ತನ್ನಲ್ಲಿರುವ ವಸ್ತುವನ್ನು ತನ್ನ ಶಕ್ತಿಗೆ ಅನುಸಾರವಾಗಿ ಮತ್ತೊಬ್ಬರಿಗೆ ಚೆನ್ನಾಗಿ ಹಂಚುವುದೇ ದಾನ' - ಎನ್ನುತ್ತಾರೆ. 'ಯಾರು ತನ್ನಲ್ಲಿರುವ ಧನದಿಂದ ತನ್ನ ಗೆಳೆಯರನ್ನೂ, ಪೂಜ್ಯರನ್ನೂ ಪೋಷಿಸುವುದಿಲ್ಲವೋ ಅವನ ಧನವು ಅವನ ನಾಶಕ್ಕೇ ಕಾರಣವಾಗುವುದು. ತನ್ನ ಸಂಪತ್ತನ್ನು ತಾನೊಬ್ಬನೇ ತಿನ್ನುವುದು. ಕೇವಲ ಪಾಪವನ್ನೇ ತಿಂದಂತೆ ಮೋಘಮನ್ನಂ ವಿಂದತೇ ಅಪ್ರಚೇತಾಃ ಸತ್ಯಂ ಬ್ರವೀಮಿ ವಧ ಇತ್ಸ ತಸ್ಯ ನಾರ್ಯಮಣಂ ಪುಷ್ಯತಿ ನೋ ಸಖಾಯಂ ಕೇವಲಾಘೋ ಭವತಿ ಕೇವಲಾದಿ - ಎಂಬುದು ಋಗ್ವೇದದ ಆದೇಶ.

ಭಗವದ್ಗೀತೆಯಲ್ಲಿ ಸಾತ್ವಿಕ, ರಾಜಸ ಮತ್ತು ತಾಮಸ - ಎಂದು ಮೂರು ಬಗೆಯ ದಾನಗಳನ್ನು ವಿವರಿಸಿದ್ದಾರೆ. 'ಇದು ಮಾಡಬೇಕೆಂದು ಶಾಸ್ತ್ರವು ವಿಧಿಸುವ ಸತ್ಕರ್ಮ. ಆದ್ದರಿಂದ ನಾನು ಇದನ್ನು ಮಾಡುವೆನು' - ಎಂಬ ಭಾವನೆ ದಾನಿಗೆ ಇರಬೇಕು; ಅವನು ಪ್ರತ್ಯುಪಕಾರವನ್ನು ಬಯಸಬಾರದು. ಯೋಗ್ಯವಾದ ಸ್ಥಳದಲ್ಲಿ, ಯೋಗ್ಯವಾದ ಕಾಲದಲ್ಲಿ ಸತ್ಪಾತ್ರನಿಗೆ ದಾನ ನೀಡಬೇಕು; ಹೀಗೆ ಆದಾಗ ಅದು ಸಾತ್ವಿಕ ದಾನ. (ದಾತವ್ಯಮಿತಿ ಯದ್ದಾನಂ ದೀಯತೇಽನುಪಕಾರಿಣೇ, ದೇಶೇ ಕಾಲೇ ಚ ಪಾತ್ರೇ ಚ ತದ್ದಾನಂ ಸಾತ್ವಿಕಂ ಸ್ಮೃತಂ. ಭ. ಗೀ: ೧೭-೨೦) ದಾನ ತೆಗೆದುಕೊಂಡವನಿಂದ ತನಗೆ ಏನಾದರೊಂದು ಪ್ರತಿಫಲವನ್ನು ಬಯಸುವುದು, ದಾನದ ಫಲವಾಗಿ ತನಗೆ ಕೀರ್ತಿಯೋ, ಪುಣ್ಯವೋ, ಸ್ವರ್ಗವೋ ಬರಲೆಂದು ಆಶೆಯನ್ನು ಇಟ್ಟುಕೊಳ್ಳುವುದು; ಯಾವುದೋ ಒಂದು ಒತ್ತಾಯಕ್ಕೆ ಸಿಲುಕಿ ಒಲ್ಲದ ಮನಸ್ಸಿನಿಂದ ಕೊಡುವುದು; ಅನ್ಯಾಯದ ಗಳಿಕೆಯಿಂದ ದಾನಮಾಡುವುದು - ಹೀಗೆ ಆದಾಗ ಅದು ರಾಜಸದಾನ. ಯತ್ತುಪ್ರತ್ಯುಪಕಾರಾರ್ಥಂ ಫಲಮುದ್ದಿಶ್ಯವಾ ಪುನಃ, ದೀಯತೇ ಚ ಪರಿಕ್ಲಿಷ್ಟಂ ತದ್ರಾಜಸ ಮುದಾಹೃತಂ. (ಭ.ಗೀ : ೧೭, ೨೧) ಸರಿಯಾದ ಸ್ಥಳ, ಸರಿಯಾದ ಕಾಲ ಇವುಗಳನ್ನು **ಬಿಟ್ಟು ಅಪಾತ್ರರಿಗೆ ಅಂದರೆ ಅರ್ಹತೆ ಇಲ್ಲದವ**ರಿಗೆ ದಾನಮಾಡುವುದು, ತೆಗೆದುಕೊಳ್ಳಲು ಬಂದವನನ್ನು ಸರಿಯಾಗಿ ಗೌರವಿಸದೆ ಅಪಮಾನ ಮಾಡಿ ಕೊಡುವುದು - ಹೀಗೆ ಆದಾಗ ಅದು ತಾಮಸ ದಾನ. ಅದೇಶಕಾಲೇ ಯದ್ದಾನ ಮಪಾತ್ರೇಭ್ಯಶ್ಚ ದೀಯಂತೆ, ಅಸತ್ಕೃತಮವಜ್ಞಾತಂ ತತ್ತಾಮಸಮುದಾಹೃತಂ. (ಭ.ಗೀ. : ೧೭, ೨೨).

ದೇವಲ ಋಷಿಯು ದಾಕ್ಕೆ ದಾತಾ, ಗೃಹೀತಾ, ದೇಯ, ದೇಶ, ಕಾಲ ಮತ್ತು ಶ್ರದ್ಧೆ ಎಂಬ ಆರು ಅಂಗಗಳನ್ನು ಹೆಸರಿಸಿದ್ದಾನೆ. ತೈತ್ತಿರೀಯ ಉಪನಿಷತ್ತು 'ಶ್ರದ್ಧಯಾ ದೇಯಂ, ಅಶ್ರದ್ಧಯಾಽದೇಯಂ, ಶ್ರಿಯಾ ದೇಯಂ, ಹ್ರಿಯಾ ದೇಯಂ, ಭಿಯಾ ದೇಯಂ, ಸಂವಿದಾ ದೇಯಂ - ಅಂದರೆ 'ಶ್ರದ್ಧೆಯಿಂದ ದಾನ ನೀಡು; ಅಶ್ರದ್ಧೆಯಿಂದ ದಾನ ಮಾಡಬೇಡ; ತನ್ನಲ್ಲಿರುವ ಸಂಪತ್ತಿಗೆ ಅನುಸಾರವಾಗಿ ಕೊಡಬೇಕು. ತಾನು ಕೊಡುವುದು ಅಲ್ಪವೆಂಬ ಲಜ್ಜೆಯ ಭಾವನೆ ಇರಲಿ; ಕೊಡದಿದ್ದರೆ ಅಪಕೀರ್ತಿ ಬರುವುದೆಂಬ ಭಯದಿಂದ ಕೊಡಬೇಕು; ಚೆನ್ನಾಗಿ ತಿಳಿದುಕೊಡಬೇಕು' - ಎಂದು ಎಚ್ಚರಿಕೆ ನೀಡುತ್ತದೆ.

ತನ್ನ ಸಂಪತ್ತಿನಲ್ಲಿ ಐದು ಪಾಲು ಮಾಡಿಕೊಂಡು, ಅದರಲ್ಲಿ ಒಂದು ಅಥವಾ ಎರಡು ಪಾಲನ್ನು ಮಾತ್ರ ದಾನಮಾಡಬೇಕೆಂದು ಧರ್ಮಶಾಸ್ತ್ರಗಳ ಆದೇಶ. ಗೃಹಸ್ಥನು ತನ್ನ ಕುಟುಂಬದ ಅವಶ್ಯಕತೆಗೆ ಮೀರಿದ ಅಂಶವನ್ನು ಮಾತ್ರ ದಾನ ಮಾಡಬೇಕು. ತನ್ನ ಕುಟುಂಬದವರು ಕಷ್ಟದಲ್ಲಿರುವಾಗ ಅವರನ್ನು ಕಡೆಗಣಿಸಿ ಹೊರಗಿನವರಿಗೆ ದಾನಮಾಡುವುದು ಸರಿಯಲ್ಲ. ಇದು ನಾಲಗೆಯ ತುದಿಗೆ ಸಿಹಿಯಾಗಿ ತೋರುವ ವಿಷವನ್ನು ತಿಂದಂತೆ' - ಎಂದು ಮನು ಹೇಳುತ್ತಾನೆ.

ಇಷ್ಟೆಲ್ಲ ತಿಳಿದ ನಂತರ ಸರಿಯಾದ ರೀತಿಯಲ್ಲಿ ದಾನಮಾಡುವುದು ಕಷ್ಟ, ಆದ್ದರಿಂದಲೇ ಮಹಾಭಾರತದಲ್ಲಿ 'ಶತೇಷು ಜಾಯತೇ ಶೂರಃ ಸಹಸ್ರೇಷು ಚ ಪಂಡಿತಃ, ವಕ್ತಾದಶಸಹಸ್ರೇಷು ದಾತಾ ಭವತಿ ವಾ ನವಾ' - ಅಂದರೆ 'ನೂರು ಜನಕ್ಕೆ ಒಬ್ಬ ಶೂರ; ಸಾವಿರಕ್ಕೆ ಒಬ್ಬ ಪಂಡಿತ; ಹತ್ತು ಸಾವಿರಕ್ಕೆ ಒಬ್ಬ ಚತುರಮಾತುಗಾರ ದೊರೆಯಬಹುದು. ಆದರೆ **ಈ** ಪ್ರಪಂಚದಲ್ಲಿ ಸರಿಯಾದ ಒಬ್ಬ ದಾನಿ ಇದ್ದಾನೋ ಇಲ್ಲವೋ' - ಎಂದು ವ್ಯಾಸರು ಹೇಳುತ್ತಾರೆ. ಭಾಗವತದಲ್ಲಿ ಬಲಿ ಚಕ್ರವರ್ತಿ 'ಯುದ್ಧದಲ್ಲಿ ಹಿಂದಿರುಗದೆ ದೇಹಗಳನ್ನು ಬಿಡುವವರು ಸುಲಭವಾಗಿ ದೊರೆಯಬಹುದು. ಆದರೆ ಸತ್ಪಾತ್ರರು ಬಂದಾಗ ಶ್ರದ್ಧೆಯಿಂದ ಹಣವನ್ನು ಕೊಡುವವರು ಹಾಗೆ ಸಿಗಲಾರರು. (ಸುಲಭಾ ಯುಧಿ ವಿಪ್ರರ್ಷೇ ಹ್ಯನಿವೃತ್ತಾ ತನುತ್ಯಜಃ, ನ ತಥಾತೀರ್ಥ ಆಯಾತೇ ಶ್ರದ್ಧಯಾ ಯೇ ಧನತ್ಯಜಃ.) - ಎನ್ನುತ್ತಾನೆ. ಆದ್ದರಿಂದಲೇ ತಿಳಿದವರು, 'ತಸ್ಮಾದ್ದಾನಂ ಪರಮಂ ವದಂತಿ' - ದಾನವನ್ನೇ ಸರ್ವಶ್ರೇಷ್ಠವೆಂದು ಹೇಳುತ್ತಾರೆ.

ಭಾಸಮಹಾಕವಿ ತನ್ನ 'ಕರ್ಣಭಾರ' ನಾಟಕದಲ್ಲಿ ಹೇಳಿದಂತೆ 'ಹುತಂ ಚ ದತ್ತಂ ಚ ತಥೈವ ತಿಷ್ಠತಿ', 'ಹೋಮಿಸಿದ್ದು ಮತ್ತು ದಾನ ಮಾಡಿದ್ದು ಮಾತ್ರ ಸ್ಥಿರವಾಗಿ ನಿಲ್ಲುವುದು' - ಯಜ್ಞ - ದಾನಗಳಿಂದ ಲಭಿಸುವ ಪುಣ್ಯ ಕಲ್ಪಾಂತಸ್ಥಾಯಿ. *

# ಋಗ್ಯಾಗ

---ಬಿ. ಎನ್ ಮುಕುಂದ.

ದಕ್ಷಿಣ ಕನ್ನಡ ಜಿಲ್ಲೆ ಕಲೆ, ಸಂಸ್ಕೃತಿ, ಶಿಕ್ಷಣಕ್ಕೆ ಹೇಗೆ ಪ್ರಸಿದ್ಧಿಯನ್ನು ಹೊಂದಿದೆಯೋ, ಅದೇ ರೀತಿ ಸಾಂಸ್ಕೃತಿಕ ಹಾಗೂ ಧಾರ್ಮಿಕ ಕಾರ್ಯಗಳಲ್ಲಿ ತನ್ನ ಅಸ್ತಿತ್ವವನ್ನು ಹೊಂದಿರುವ ಕಡಲತೀರದ ನಾಡು ಆಗಿದೆ. ಇವೆಲ್ಲಕ್ಕೂ ಶಿಖರ ಪ್ರಾಯವಾಗಿರುವುದು ಉಡುಪಿಯ ಅಷ್ಟಮಠಗಳು. ಈ ಅಷ್ಟ ಮಠಗಳಲ್ಲಿ ಪಲಿಮಾರು ಭಂಡಾರಕೇರಿ ಮಠದ ಶ್ರೀ ವಿದ್ಯಾಮಾನ್ಯತೀರ್ಥರು ಜ್ಞಾನವಯೋವೃದ್ಧರು, ಆಗಿದ್ದು, ಇವರು ಯಾವುದೇ ಧಾರ್ಮಿಕ ಹಾಗೂ ಸಾಂಸ್ಕೃತಿಕ ಕಾರ್ಯವನ್ನು ಕೈಗೊಂಡರೂ ಸರ್ವೇ ಜನಃಸುಖಿನೋ ಭವಂತು ಎಂಬಂತೆ ಜ್ಞಾನ ಪೂರ್ವಕವಾದ ಹಾಗೂ ವ್ಯವಸ್ಥಿತ ರೀತಿಯಲ್ಲಿ ನಡೆಸುವಂತಹವರು.

ಉಡುಪಿಯಿಂದ ಸುಮಾರು ಒಂದು ತಾಸು ಪ್ರಯಾಣದ "ಫಲಿಮಾರು" ಗ್ರಾಮದಲ್ಲಿ ಕಳೆದ ತಿಂಗಳು (೧೦ ಮತ್ತು ೧೧-೧-೯೬) "ಋಗ್ ಸಂಹಿತಾ ಯಾಗ"ದಲ್ಲಿ ಭಾಷ್ಯ ಹಾಗೂ ಭೂವರಾಹ ಯಜ್ಞವನ್ನು ನಡೆಸಿದರು. ಭೂಮಿಯಲ್ಲಿ ಬೆಳೆಯುವ ಸಸ್ಯಗಳ ಹಾಗೂ ಫಸಲಿನ ಗುಣಮಟ್ಟದ ರಕ್ಷಣೆಗಾಗಿ ಭೂಮಿತಾಯಿಯ ಪತಿಯಾದ ಶ್ರೀವರಾಹರೂಪಿ ಭಗವಂತನನ್ನು ಕುರಿತು ನಡೆಸಿದ ಯಾಗ ಭೂವರಾಹ ಮತ್ತು ಕಾಲಕಾಲಕ್ಕೆ ಮಳೆ, ಬೆಳೆಯನ್ನು ನೀಡಿ, ಸಜ್ಜನರ ಮನಸ್ಸಿನಲ್ಲಿ ಸರ್ವಜನರ ಸುಖ ಸಂತೋಷಕ್ಕಾಗಿ ಮನದಲ್ಲಿ ಆಲೋಚಿಸುವ ಶಕ್ತಿಯನ್ನು ನೀಡಿ, ಕಾರ್ಯ ಪ್ರವತ್ತರಾಗುವುದಕ್ಕಾಗಿ "ಋಗ್ ಭಾಷ್ಯ" ಯಾಗವನ್ನು ನಡೆಸಿದರು.

ಸದಾ ಹಸಿರಿನಿಂದ ಕೂಡಿದ ಫಲಿಮಾರು ಗ್ರಾಮದಲ್ಲಿ ಈಶ್ವರ ದೇವಾಲಯ ಹಾಗೂ ಮಠದಲ್ಲಿ ನವೀಕರಣ ಕೊಂಡ ಆಂಜನೇಯ ದೇವಾಲಯ ಇದ್ದು, ಸುಮಾರು ೫೦ ವಿದ್ಯಾರ್ಥಿಗಳು ವೇದಾಧ್ಯಯನ ಹಾಗೂ ಪೌರೋಹಿತ್ಯವನ್ನು ವ್ಯಾಸಂಗ ಮಾಡುತ್ತಿದ್ದಾರೆ.

ಈ ಋಗ್ ಸಂಹಿತಾಯಾಗದಲ್ಲಿ ಹವನ ಹೋಮಗಳು ಹಾಗೂ ಶ್ರೀ ಆಂಜನೇಯ ಸ್ವಾಮಿಗೆ ಶುದ್ಧ ಕಲಶಾಭಿಷೇಕವು ವೇದಮೂರ್ತಿ ಶೀರೂರು ವೇದವ್ಯಾಸ ತಂತ್ರಿಗಳಿಂದ ನಡೆಯಿತಲ್ಲದೆ, ಋಗ್ ಭಾಷ್ಯದಲ್ಲಿ ಆಚಾರ ಮಧ್ವರು ಎಂಬ ಬಗ್ಗೆ ವಿದ್ಯಾರತ್ನಾಕರ ಬನ್ನಂಜೆಗೋವಿಂದಾಚಾರ್ಯರಿಂದ ಪ್ರವಚನ ನಡೆಯಿತು.

"ಸಜ್ಜನರ ಸಂಗ ಎನಗೇ ನೀಡೋ ಹರಿಯೇ" ಎಂಬ ದಾಸರಾಯರ ವಾಣಿಯಂತೆ, ತಮ್ಮ ಪಟ್ಟದ ದೇವರುಗಳಾದ ರಾಮ, ವಿಠಲ ಗೋಪಿನಾಥ, ಕೃಷ್ಣರೊಡಗೂಡಿದ ಸಂತರ ಸಮ್ಮೇಳನವು ಈ ಋಗ್ ಸಂಹಿತಾಯಾಗದಲ್ಲಿ ಪ್ರಮುಖ ಆಕರ್ಷಣೆಯಾಗಿದ್ದು, ಈ ಕಾರ್ಯಕ್ರಮದಲ್ಲಿ ಭಾಗವಹಿಸಿದ್ದ ಸಂತರೆಂದರೆ, ಮುಳಬಾಗಲು ಶ್ರೀಪಾದರಾಜ ಮಠದ ಶ್ರೀ ವಿಜ್ಞಾನನಿಧಿತೀರ್ಥರು, ಪೇಜಾವರ ಮಠಾಧೀಶರಾದ ಶ್ರೀ ವಿಶ್ವೇಶತೀರ್ಥರು, ವಿಶ್ವಪ್ರಸನ್ನ ತೀರ್ಥರು (ಪೇಜಾವರ ಕಿರಿಯರು), ಪ್ರತ್ತಿಗೆ ಮಠದ ಶ್ರೀ ಸುಗುಣೇಂದ್ರ ತೀರ್ಥರು, ಸುಬ್ರಮಣ್ಯ ಮಠದ ಪ್ರಸಿದ್ಧ ಗಾಯಕರಾದ ಶ್ರೀ ವಿದ್ಯಾಭೂಷಣ ತೀರ್ಥರು, ಭಂಡಾರಿಕೇರಿಮಠದ (ಕಿರಿಯ) ವಿದ್ಯೇಶತೀರ್ಥರು, ಅದಮಾರು ಮಠದ ಶ್ರೀ ವಿಶ್ವಪ್ರಿಯ ತೀರ್ಥರು ಮುಖ್ಯ ಅತಿಥಿಗಳಾಗಿ ಭಾಗವಹಿಸಿದ್ದರು.

## ದಾಸರಾಯರ ಗಾನ ರಸದೌತಣ

"ಎಂದು ಕಾಂಬೆನೋ ದೇವ" ಎಂದು ದಾಸರು ನುಡಿದಂತೆ, ಭಗವಂತನನ್ನು ಓಲೈಸಿಕೊಳ್ಳಲು ಅನೇಕ ವಿಧಾನದಲ್ಲಿ ಅರ್ಚಿಸಿ, ಪೂಜಿಸುವುದು ಒಂದು ಕಡೆಯವರೆ ಭಗವಂತನ ಗುಣಗಾನದಿಂದ ಮೈಮರೆದು ಹಾಡುವುದಲ್ಲದೆ, ಶ್ರೋತ್ರಗಳು ಭಕ್ತಿಯೆಂಬ ನದಿಯಲ್ಲಿ ಈಜಾಡುವಂತೆ ಗಾಯನ ಮಾಡಿದವರು ಬಾಗಲಕೋಟೆಯ ಅನಂತಕುಲಕರ್ಣಿಯವರು.

ವೇದಶಾಸ್ತ್ರ ಪುರಾಣಾದಿಗಳ ಅಳವನ್ನು ಸರಳ ಕನ್ನಡದಲ್ಲಿ ಪದಪದ್ಯ ಸುಳಾದಿಗಳ ಮೂಲಕ ರಚಿಸಿ ಜನಸಾಮಾನ್ಯರು ತಿಳಿಯುವಂತೆ ಮಾಡಿದ ದಾಸರಾಯರ ಪದಪದ್ಯ ಸುಳಾದಿಗಳನ್ನು ನೆರೆದಿದ್ದ ಸಂತರ ಹಾಗೂ ಸಭಿಕರ ಕರ್ಣಗಳಿಗೆ ಉಣಿಸಿ, ಕೆಲವು ನಿಮಿಷಗಳಾದರೂ ಸಾಂಸಾರಿಕ ಜಂಜಾಟವನ್ನು ಮರೆಸಿ ಗಾನದ ರಸದೌತಣವನ್ನು ನೀಡಿದವರು ಅನಂತ ಕುಲಕರ್ಣಿಯವರು.

"ಋಗ್ ಸಂಹಿತಾ ಯಾಗ" ಋಗ್‌ವೇದ ಮಂತ್ರಗಳಿಂದ ಭಗವಂತನನ್ನು ಆರಾಧಿಸಿ, ಈ ಭೂಮಂಡಲದಲ್ಲಿರುವ ಸಕಲ ಚರಾಚರ ಪ್ರಾಣಿಗಳಿಗೂ ಒಳ್ಳೆಯದನ್ನು ಮಾಡಲಿ ಎಂಬುದು. ಈ ಮಹತ್‌ಯಾಗದ ಹಾಗೂ ಈ ಎಲ್ಲಾ ಕಾರ್ಯಕ್ರಮಗಳ ರೂವಾರಿ ಫಲಿಮಾರು ಮಠದ ಕಿರಿಯ ಸ್ವಾಮಿಜಿ ಶ್ರೀವಿದ್ಯಾಧೀಶತೀರ್ಥರು. ಸದಾ ಹಸನ್ಮುಖರಾಗಿ ಪ್ರತಿಯೋರ್ವರ ಯೋಗಕ್ಷೇಮವನ್ನು ವಿಚಾರಿಸಿಕೊಳ್ಳುವುದಲ್ಲದೆ ರಾಜ್ಯ ಹಾಗೂ ನೆರೆಯ ರಾಜ್ಯಗಳಲ್ಲಿರುವ ಪಂಡಿತರನ್ನು ಈ ಯಾಗಕ್ಕಾಗಿಯೇ ಕರೆಸಿ ಅವರೆಲ್ಲರಿಗೂ ಸೂಕ್ತಸನ್ಮಾನವನ್ನು ಮಾಡಿ, ಈ ಜ್ಞಾನ ಯಜ್ಞದಿಂದ ಕೂಡಿದ ಯಾಗವು ತಮ್ಮದೇ ಎಂಬ ಭಾವನೆಯಲ್ಲಿ ಪ್ರತಿಯೋರ್ವರು ಆನಂದಿಸುವಂತೆ ಮಾಡಿದರು. ❋



ಕೊಳ್ಳಿರಿ ಕೊಂಡು ಓದಿರಿ

# ಮುಂದಿನ ಸಂಚಿಕೆಯಲ್ಲಿ

## ಸಪ್ತಗಿರಿ

## ಏಪ್ರಿಲ್ 1996

ಶಂಕರ ರಾಮಾನುಜರು ಭಾರತೀಯ ತತ್ವಶಾಸ್ತ್ರದ ಚರಿತ್ರೆಯಲ್ಲಿ ಹಿರಿಯ ಹೆಸರುಗಳು. ಅವರ ಜಯಂತಿ ಉತ್ಸವಗಳು ಏಪ್ರಿಲ್ ತಿಂಗಳಿನಲ್ಲಿ. ಹಾಗಾಗಿ ಸಪ್ತಗಿರಿಯನ್ನು ಸರ್ವಾಂಗ ಸುಂದರಗೊಳಿಸುವ ಮತ್ತೊಂದು ಪ್ರಯತ್ನವಿಲ್ಲಿದೆ.

### ಶಂಕರಾಚಾರ್ಯರು :

ಶಂಕರರ ಅದ್ವೈತ ಸಿದ್ಧಾಂತದ ಒಂದು ನೋಟ, ಶಂಕರ ವಿಜಯದ ಒಂದು ವಿವರ -ಎಲ್ಲವನ್ನೂ ಕಿರಿದಾಗಿ ಹಿಡಿದಿರಿಸಿದ್ದಾರೆ ಪ್ರಾಧ್ಯಾಪಕ ಎಚ್. ವಿ. ನರಸಿಂಹ ಮೂರ್ತಿ.

### ಶ್ರೀಭಾಷ್ಯಪ್ರವೇಶ :

ರಾಮಾನುಜಾಚಾರ್ಯರನ್ನು ಶ್ರೀಭಾಷ್ಯಕಾರರೆಂದೇ ಗುರುತಿಸಲಾಗಿದೆ. ಅವರ ಸಾಹಿತ್ಯ ಸೃಷ್ಟಿಯಲ್ಲಿಯೇ ಅಲ್ಲದೆ ಭಾರತೀಯ ಧಾರ್ಮಿಕ ಸಾಹಿತ್ಯದಲ್ಲೂ ಮೇರುಕೃತಿ ಶ್ರೀಭಾಷ್ಯ. ಅದರ ವಿವರವನ್ನಿಲ್ಲಿ ಪ್ರಸ್ತುತ ಪಡಿಸಿದ್ದಾರೆ ವಿದ್ವಾನ್ ರಘುಸುತ.

### ಶ್ರೀರಂಗ ಮಹಾತ್ಮೆ:

ಕಾವೇರಿಯ ತಣ್ಣೆಳಲ್ಲಿ ಕ್ಷೀರಸಾಗರಶಾಯಿ ಸುಖವಾಗಿ ಮಲಗಿರುವ ಕ್ಷೇತ್ರಗಳು ಹಲವಾರು. ಅವುಗಳಲ್ಲಿ ಶ್ರೀರಂಗ ಅತಿಶ್ರೇಷ್ಠ; ಅದರ ಮೂರ್ತಿಯ ಮಹಿಮೆ ಅಪೂರ್ವ. ಅದನ್ನು ವಿವರಿಸಿದ್ದಾರೆ ಕಂದಾಡೈ ಕೇಶವನ್.

### ಕುಲಶೇಖರರಲ್ಲಿ ನಾಯಿಕಾಭಾವ:

ಕುಲಶೇಖರಾಳ್ವಾರರು ಆಳ್ವಾರರುಗಳಲ್ಲಿ ಹೆಸರಾದವರು. ತಿರುಮಲೆಯಲ್ಲಿ ಏನಾದರೂ ಆಗಿ ನಿನ್ನ ಸನ್ನಿಧಿಯಲ್ಲಿದ್ದರೆ ಸಾಕು ಎಂದು ಸ್ವಾಮಿಯನ್ನು ಬೇಡಿದವರು. ಅವರ ಪಾಶುರಗಳಲ್ಲಿನ ನಾಯಿಕಾಭಾವಕ್ಕೆ ಕನ್ನಡಿ ಹಿಡಿದಿದ್ದಾರೆ

- ಎಂ. ಆರ್. ನರಸಿಂಹನ್.

ಜೊತೆಗೇ ಹಲವಾರು ಸಾಮಯಿಕ ಲೇಖನಗಳೊಡನೆ ಹೊರಬರಲಿದೆ.

ನಿಮ್ಮ ಪ್ರತಿಯನ್ನು ಕಾಯ್ದಿರಿಸಿ. ಬಿಡಿಪ್ರತಿ ಏಪ್ರಿಲ್ 1996 ರಿಂದ ರೂ. 4/- ಮಾತ್ರ. ವಾರ್ಷಿಕಚಂದಾ ರೂ. 48/- ವಾರ್ಷಿಕ ಚಂದಾ ಕಳುಹಿಸಬೇಕಾದ ವಿಳಾಸ - ಸಂಪಾದಕರು - ಸಪ್ತಗಿರಿ, ತಿ.ತಿ.ದೇ. ತಿರುಪತಿ - 517 507

ಓದಿರಿ ಓದಿಸಿರಿ

# ತಿಂಗಳಿನ ಮುಖ್ಯ ದಿನಗಳು

## ಏಪ್ರಿಲ್ --- 1996

1. ಸೋಮವಾರ :
ತಿರುಮಲೆಯಲ್ಲಿ
ವಸಂತೋತ್ಸವಾರಂಭ.
ಮಹಾವೀರ ಜಯಂತಿ.

2. ಮಂಗಳವಾರ :
ತಿರುಮಲೆಯಲ್ಲಿ ರಜತರಥೋತ್ಸವ.

3. ಬುಧವಾರ :
ತಿರುಮಲೆಯಲ್ಲಿ
ವಸಂತೋತ್ಸವ ಸಮಾಪ್ತಿ.

13. ಶನಿವಾರ :
ಸೌರಮಾನ ಯುಗಾದಿ.

21. ಭಾನುವಾರ :
ಬಸವ ಜಯಂತಿ.

22. ಸೋಮವಾರ :
ಶಂಕರಜಯಂತಿ.

23. ಮಂಗಳವಾರ :
ರಾಮಾನುಜ ಜಯಂತಿ.

27. ಶನಿವಾರ :
ಶ್ರೀ ಪದ್ಮಾವತೀ ಶ್ರೀನಿವಾಸ.
ಪರಿಣಯೋತ್ಸವಾರಂಭ.

28. ಭಾನುವಾರ :
ವಾಸವಾಂಬಾ ಜಯಂತಿ.

29. ಸೋಮವಾರ :
ಶ್ರೀ ಪದ್ಮಾವತೀ ಶ್ರೀನಿವಾಸ
ಪರಿಣಯೋತ್ಸವ ಸಮಾಪ್ತಿ.

# ವಾರ್ತಾಲಹರಿ



## ಶ್ರೀನಿವಾಸ ಮಂಗಾಪುರದಲ್ಲಿ ವೈಭವದ ಬ್ರಹ್ಮೋತ್ಸವ

ಚಂದ್ರಗಿರಿಯ ಸಮೀಪದ ಶ್ರೀನಿವಾಸ ಮಂಗಾಪುರದ ಶ್ರೀ ಕಲ್ಯಾಣವೆಂಕಟೇಶ್ವರಸ್ವಾಮಿಯ ವಾರ್ಷಿಕ ಬ್ರಹ್ಮೋತ್ಸವ ಫೆಬ್ರವರಿ 8 ರಿಂದ 17 ರ ವರೆಗೆ ವೈಭವ ಉತ್ಸಾಹಗಳಿಂದ ನಡೆದು ಸಂಪನ್ನವಾಯಿತು.

ತದಂಗವಾಗಿ ಇಡೀ ದೇವಾಲಯ ಪರಿಸರವನ್ನು ಶೋಭಾಯಮಾನವಾದ ರೀತಿಯಲ್ಲಿ ಅಲಂಕರಿಸಲಾಗಿದ್ದಿತು. ತಿರುಪತಿಯಿಂದಲೂ ಚಂದ್ರಗಿರಿಯಿಂದಲೂ ಹೆಚ್ಚಿನ ಬಸ್ ಸೌಲಭ್ಯ ಒದಗಿಸಲಾಗಿದ್ದಿತು. ಸ್ವಾಮಿಯನ್ನು ವಿವಿಧ ವಾಹನಗಳಲ್ಲಿ ಊರ ಮೆರವಣಿಗೆಯಲ್ಲಿ ಕರೆದು ತಂದಾಗ ಅಪಾರವಾದ ಜನಸಂದಣಿ ಆಸಕ್ತಿ ಭಕ್ತಿಗಳಿಂದ ಸ್ವಾಮಿಯನ್ನು ಸ್ವಾಗತಿಸಿದರು. ದಿನವೂ ಸಾಂಸ್ಕೃತಿಕ ಕಾರ್ಯಕ್ರಮಗಳು ಏರ್ಪಾಡಾಗಿ ಹೆಚ್ಚಿನ ಜನವನ್ನು ಸೆಳೆವಲ್ಲಿ ಯಶಸ್ವಿಯಾದವು.

ಹದಿಮೂರರಂದು ಸಂಜೆ ಗರುಡೋತ್ಸವ. ಅದಕ್ಕಾಗಿ ಅಂದು ಬೆಳಿಗ್ಗೆ ತಿರುಪತಿಯ ಶ್ರೀ ಗೋವಿಂದರಾಜಸ್ವಾಮಿ ಆಲಯದಿಂದ ಸುಮಾರು ಐದುನೂರು ಮಂದಿ ಭಕ್ತರು ತಿ.ತಿ.ದೇ. ಜೆ.ಇ.ಓ. ಶ್ರೀ ಸತ್ಯನಾರಾಯಣರಾವ್ ಅವರ ನೇತೃತ್ವದಲ್ಲಿ,











ತೋಮಾಲೆಯನ್ನು ತಲೆಯ ಮೇಲೆ ಹೊತ್ತು ಭಜನ ಬೃಂದಗಳಾಗಿ ಶ್ರೀನಿವಾಸ ಮಂಗಾಪುರಕ್ಕೆ ಬಂದು ಸ್ವಾಮಿಗೆ ಅವುಗಳನ್ನು ತಲುಪಿಸಿದ ನಂತರ, ಈ ಆಂಡಾಳ್ ಶೂಡಿಕೊಡುತ್ತ ಮಾಲೆಯನ್ನು ಸ್ವಾಮಿಗೆ ಅಲಂಕರಿಸಿ ಗರುಡವಾಹನದಲ್ಲಿ ಊರ ಮೆರವಣಿಗೆಯಲ್ಲಿ ಸ್ವಾಮಿಯನ್ನು ಕರೆಮೊಯ್ಯಾಗ ಸುತ್ತಮುತ್ತಲ ಗ್ರಾಮಗಳಿಂದಲೂ ದೂರದೂರುಗಳಿಂದ ಬಂದವರಿಂದಲೂ ತುಂಬಿದ್ದ ಶ್ರೀನಿವಾಸಮಂಗಾಪುರದಲ್ಲಿ ಗೋವಿಂದ ನಾಮಘೋಷ ಮುಗಿಲು ಮುಟ್ಟಿದ್ದಿತು. ಸುಮಾರು ಹತ್ತು ಸಾವಿರಕ್ಕೂ ಮಿಾರಿ ಜನ ಇಲ್ಲ ಸೇರಿದ್ದರೆಂದು ವರದಿಯಾಗಿದೆ.

ಹದಿನಾರರಂದು ಬೆಳಗ್ಗೆ ರಥೋತ್ಸವ ದಿವ್ಯವಾಗಿ ನಡೆಯಿತು. ತಿರುಮಲೆಯ ಬ್ರಹ್ಮೋತ್ಸವದಂತೆಯೇ ಉಳಿದ ಆಲಯಗಳಲ್ಲೂ ಬ್ರಹ್ಮೋತ್ಸವ ಜನಾಕರ್ಷಕ ಕೇಂದ್ರಗಳಾಗಬೇಕೆಂದು ಪ್ರಯತ್ನಿಸುತ್ತಿರುವ ಕಾರ್ಯನಿರ್ವಹಣಾಧಿಕಾರಿ ಶ್ರೀ ರಮೇಶ ಕುಮಾರ್ ಅವರ ಪರ್ಯವೇಕ್ಷಣೆಯಲ್ಲಿ ಶ್ರೀನಿವಾಸಮಂಗಾಪುರದ ಬ್ರಹ್ಮೋತ್ಸವ ಹಿಂದಿನ ವರ್ಷಗಳಿಗಿಂತ ಹೆಚ್ಚಿಗೆ ಕಳೆಗಟ್ಟಿ, ಜನಮನವನ್ನು ಸೂರೆಗೊಂಡಿತು.

## ಸ್ವಾಮಿ ಸೇವೆಗೆ ಕರ್ನಾಟಕದ ಆನೆಗಳು

ತಿರುಮಲೆಯ ಶ್ರೀ ವೆಂಕಟೇಶ್ವರ ಸ್ವಾಮಿಯ ಸೇವೆಗಾಗಿ ಕರ್ನಾಟಕ ಸರ್ಕಾರ ಫೆಬ್ರವರಿ 26 ರಂದು ಎರಡು ಆನೆಗಳನ್ನು ಕಾಣಿಕೆಯಾಗಿ ಬಹೂಕರಿಸಿದೆ. ಕರ್ನಾಟಕದ ಅರಣ್ಯ ಇಲಾಖೆಯವರು ಏರ್ಪಾಡು ಮಾಡಿದ್ದ ಸರಳ ಸಮಾರಂಭದಲ್ಲಿ ರಾಜ್ಯ ಮುಖ್ಯಮಂತ್ರಿ ಶ್ರೀ ಎಚ್. ಡಿ. ದೇವೇಗೌಡರು ಸತೀಸಮೇತರಾಗಿ ರಾಜ್ಯದ ಪರವಾಗಿ ಈ ಗಜದ್ವಯವನ್ನು ತಿ. ತಿ. ದೇವಸ್ಥಾನಗಳಿಗೆ ಒಪ್ಪಿಸಿದರು. ಶಿವಮೊಗ್ಗೆಯ ಅರಣ್ಯದಿಂದ ತರಲಾದ ಪದ್ಮ ಗಣೇಶ ನಾಮಧೇಯದ ಈ ಆನೆಗಳು ಸ್ವಾಮಿ ಸೇವೆಯಲ್ಲಿ ಕರ್ನಾಟಕದ ತವರಿನ ಹೆಸರುಳಿಸುವಂತಾಗಲಿ ಎಂದು ಮುಖ್ಯಮಂತ್ರಿಗಳು ಕುಟುಂಬದ ಹಿರಿಯರಾಗಿ ಹಾರೈಸಿದರು. ತಿರುಪತಿಯ ತಿಮ್ಮಪ್ಪನೆಂದು ಪ್ರಿಯವಾದ ಸ್ವಾಮಿಯ ಸೇವೆಯಲ್ಲಿ ಈ ಹಿಂದೆಯೂ ಕರ್ನಾಟಕದ ಆನೆಗಳು ಸಾರ್ಥಕ ಬದುಕು ಸಾಗಿಸಿವೆಯೆಂದು ಅರಣ್ಯ ಇಲಾಖಾ ಮುಖ್ಯರು ಅಭಿಪ್ರಾಯಪಡುತ್ತ, ತಿರುಮಲೆಯ ಪರಿಸರದ ಹಸಿರು ಹೊದಿಕೆಯ ರಕ್ಷಣೆಗಾಗಿ ಇಲಾಖೆ ಸಾವಿರಾರು ಸಸಿಗಳನ್ನು ನೀಡಿರುವುದನ್ನೂ ನೆನೆದರು.

## ನೇತ್ರ ಚಿಕಿತ್ಸಾ ಶಿಬಿರ

ತಿ. ತಿ. ದೇವಸ್ಥಾನಗಳು ಪ್ರತಿ ವರ್ಷವೂ ನಡೆಸುವ ನೇತ್ರ ಚಿಕಿತ್ಸಾ ಶಿಬಿರಗಳು ಕಳೆದ ಮೂವತ್ತನಾಲ್ಕು ವರ್ಷಗಳಿಂದ ಯಶಸ್ವಿಯಾಗಿ ನಡೆಯುತ್ತ ಬಂದಿದ್ದು, 35ನೇ ನೇತ್ರಚಿಕಿತ್ಸಾ ಶಿಬಿರವನ್ನು ಇದೇ ಫೆಬ್ರವರಿ 17 ರಂದು ಶನಿವಾರ ತಿರುಪತಿಯ ಮೂರನೇ ಸತ್ರದಲ್ಲಿ ಹೈದರಾಬಾದಿನ ಸರೋಜಿನಿ ಕಣ್ಣಿನ ಆಸ್ಪತ್ರೆಯ ಸಹಕಾರದಿಂದ ಯಶಸ್ವಿಯಾಗಿ ನಿರ್ವಹಿಸಲಾಯಿತು.

ಎರಡು ದಿನಗಳ ಈ ನೇತ್ರ ಚಿಕಿತ್ಸಾ ಶಿಬಿರದಲ್ಲಿ ಸರೋಜಿನಿ ಕಣ್ಣಿನ ಆಸ್ಪತ್ರೆಯ ನೇತ್ರ ವೈದ್ಯ ಡಾ|| ಪಿ. ರಂಗಾರೆಡ್ಡಿಯವರು ತಮ್ಮ ಸಿಬ್ಬಂದಿಯೊಡನೆ ಭಾಗವಹಿಸಿ, ಎರಡು ಸಾವಿರಕ್ಕೂ ಹೆಚ್ಚು ಜನರ ನೇತ್ರ ಪರೀಕ್ಷೆ, ಚಿಕಿತ್ಸೆ, ನಡೆಸಿದರು. 306 ಕ್ಯಾಟರಾಕ್ಟ್ ಶಸ್ತ್ರಚಿಕಿತ್ಸೆ, 29 ಲೆನ್ಸ್‌ಗಳ ಜೋಡಣೆಗಳು ನಡೆದವು. ಚಿಕಿತ್ಸೆಗೆ ಹಾಜರಾದ ನೇತ್ರ ರೋಗಿಗಳಿಗೆ ಉಚಿತ ಭೋಜನ, ವಸತಿಗಳನ್ನು ಕಲ್ಪಿಸಿದ್ದೇ ಅಲ್ಲದೇ, ತಿ.ತಿ.ದೇ. ಅವರ ಔಷಧೋಪಚಾರ, ಸುಲೋಚನಗಳ ವ್ಯವಸ್ಥೆಯನ್ನೂ ಉಚಿತವಾಗಿ ನೆರವೇರಿಸಿತು.

ತತ್ಸಂಬಂದರಲ್ಲಿ ನಡೆದ ಪತ್ರಿಕಾ ಸಮಾವೇಶದಲ್ಲಿ ಮಾತನಾಡುತ್ತ ಡಾ|| ರಂಗಾರೆಡ್ಡಿಯವರು ತಿರುಪತಿಯಲ್ಲಿ ತಿ.ತಿ.ದೇ. ಸಹಕಾರದಿಂದ ಒಂದು 'ನೇತ್ರ ಬ್ಯಾಂಕ್' ಅನ್ನು ತೆರೆಯುವ ಯೋಜನೆಯನ್ನು ತೆರೆದಿಟ್ಟರು. ತಿ.ತಿ.ದೇ. ಕಾರ್ಯನಿರ್ವಹಣಾಧಿಕಾರಿ ಶ್ರೀ ಎಸ್. ರಮೇಶಕುಮಾರ್ ಅವರು ನೇತ್ರ ಸಂರಕ್ಷಣೆಯಲ್ಲಿ ಪರಿಸರ ಪರಿಶುಭ್ರತೆಯ ಪ್ರಾಧಾನ್ಯವನ್ನು ಪ್ರಚಾರ ಮಾಡಬೇಕಿದೆ ಎಂದು ನುಡಿದರು. ತಿ.ತಿ.ದೇ. ವೈದ್ಯಾಧಿಕಾರಿ ಡಾ|| ವೆಂಕಟಲಕ್ಷ್ಮಿ, ಡಾ|| ವೇಣುಗೋಪಾಲರೆಡ್ಡಿ ಅವರುಗಳೂ ಸಮಾವೇಶದಲ್ಲಿ ಭಾಗವಹಿಸಿದ್ದರು.

## ಎಸ್. ಜಿ. ಕಾಲೇಜಿನ ರಜತೋತ್ಸವ

1967 - 68 ರಲ್ಲಿ ಅಧಿಕಾರವರ್ಗ ನಿರ್ಣಯಿಸಿದಂತೆ ಸ್ಥಾಪನೆಯಾದ ತಿ. ತಿ. ದೇ. ಗಳ ಶ್ರೀ ಗೋವಿಂದರಾಜಸ್ವಾಮಿ ಆರ್ಟ್ಸ್ ಕಾಲೇಜಿನ ರಜತೋತ್ಸವಗಳು ಒಂದು ವರ್ಷಕಾಲ ನಡೆಯಬೇಕೆಂದು ಯೋಜಿತವಾಗಿದೆ. ಇಪ್ಪತ್ತೈದು ವರ್ಷದ ಹಿಂದೆ ಇಂದಿನ ಪ್ರಧಾನಮಂತ್ರಿ ಶ್ರೀ ಪಿ. ವಿ. ನರಸಿಂಹರಾವ್ ಅವರು ಆಂಧ್ರಪ್ರದೇಶದ ವಿದ್ಯಾಶಾಖಾಮಂತ್ರಿಯಾಗಿದ್ದಾಗ 1969 ರ ನವಂಬರಿನಲ್ಲಿ ಅಂದಿನ ರಾಜ್ಯ ಮುಜರಾಯಿ ಇಲಾಖಾ ಮಂತ್ರಿ ಶ್ರೀ ರುದ್ರಂರಾಜು ಅವರು ಈ ಕಾಲೇಜಿನ ಆರಂಭೋತ್ಸವವನ್ನು ನೆರವೇರಿಸಿಕೊಟ್ಟಿದ್ದರು. ಮೊದಲಿಗೆ ಎಸ್. ವಿ. ಪ್ರೌಢಶಾಲೆಯಲ್ಲಿ ಹದಿನೇಳು ವರ್ಷ ಕಾಲೇಜು ನಡೆದ ಮೇಲೆ ತಿರುಚಾನೂರು ರಸ್ತೆಯಲ್ಲಿನ ಹೊಸ ಸ್ವಂತ ಭವನವನ್ನು 1986-87 ರಲ್ಲಿ ಹೊಂದಿ ಬೆಳೆಯುತ್ತಿರುವ ಈ ಸಂಸ್ಥೆಯಲ್ಲಿ ಈಗ ಎಂ.ಬಿ.ಎ., ಎಂ.ಎಸ್‌ಸಿ; ಎಂ.ಸಿ.ಎ., ಕೋರ್ಸ್‌ಗಳನ್ನೂ ಆರಂಭಿಸಲು ರಂಗಸಿದ್ಧವಾಗಿದೆ.

ರಾಜ್ಯ ಸಮಾಚಾರ ಶಾಖಾಮಂತ್ರಿ ಶ್ರೀ ವೇಣುಗೋಪಾಲಾಚಾರಿ ಅವರು ಸ್ಥಳೀಯ ಎಂ.ಎಲ್. ಎ. ಹಾಗೂ ತಿ.ತಿ.ದೇ. ಧರ್ಮಕರ್ತರ ಮಂಡಳಿಯ ಸದಸ್ಯ ಶ್ರೀ ಮೋಹನ್ ಅವರ ಅಧ್ಯಕ್ಷತೆಯಲ್ಲಿ ರಜತೋತ್ಸವದ ಉದ್ಘಾಟನೆಯನ್ನು ಮಾರ್ಚ್ ತಿಂಗಳಿನಲ್ಲಿ ನೆರವೇರಿಸಲಿದ್ದಾರೆ. ಈ ಉದ್ಘಾಟನೆ ರಜತೋತ್ಸವಗಳ ಮೊದಲ ಹಂತವೆಂದೂ ಎರಡನೆಯ ಹಂತ ಬರುವ ವಿದ್ಯಾಸಂವತ್ಸರದಲ್ಲಿ ನಡೆಯುವುದೆಂದೂ ಕಾಲೇಜಿನ ಪ್ರಾಂಶುಪಾಲ ಶ್ರೀ ಜಿ. ಸತ್ಯನಾರಾಯಣರಾವ್ ಅವರು ತಿಳಿಸಿದ್ದಾರೆ.

## ಮೈಸೂರಿನಲ್ಲಿ ಮಧ್ವನವಮಿ

ದಿನಾಂಕ 1-2-96 ರಿಂದ 4-2-96 ರ ವರೆಗೆ ಮೈಸೂರಿನ ಉತ್ತರಾದಿ ಮಠದಲ್ಲಿ, ಸ್ಥಳೀಯ ಶ್ರೀ ಮಾಧ್ವಸಂಘ ಹಾಗೂ ತಿ.ತಿ.ದೇ. ದಾಸಸಾಹಿತ್ಯ

ಪ್ರಾಜೆಕ್ಟ್ ವತಿಯಿಂದ ಮಧ್ವನವಮಿ ಉತ್ಸವಗಳು ನಡೆದು ಯಶಸ್ವಿಯಾದವು.

1-2-96 ರಂದು ಪಂಡಿತ ಮಾಳಗಿ ರಾಮಾಚಾರ್ಯರು ಉದ್ಘಾಟಿಸಿದ ಉತ್ಸವಗಳಲ್ಲಿ ವಿದ್ವಾನ್ ಗುರುರಾಜ ದಾಸರು ಹರಿಕಥೆ ನಡೆಸಿಕೊಟ್ಟರು. ಡಾ|| ನಾಗರಾಜ ಹವಾಲ್ದಾರರು ಉಪನ್ಯಾಸ ನೀಡಿದರು.

2-2-96 ರಂದು ಪಂಡಿತ ಮಾಳಗಿ ರಾಮಾಚಾರ್ಯರು ಭಗವದ್ಗೀತೆಯ ಕರ್ಮ, ಭಕ್ತಿ, ಜ್ಞಾನ ಯೋಗಗಳನ್ನು ವಿವರಿಸಿದರು. ಡಾ|| ವಿ. ಪ್ರಭಂಜನಾಚಾರ್ಯರು ಮಧ್ವಸಿದ್ಧಾಂತಸಾರವನ್ನು ವಿವರಿಸಿದರು.

3-2-96 ರಂದು ಡಾ|| ಸಿ. ಎಚ್. ಶ್ರೀನಿವಾಸ ಮೂರ್ತಿಯವರು ಅನುವ್ಯಾಖ್ಯಾನದ ಹಿರಿಮೆಯ ಬಗ್ಗೆ ಮಾತನಾಡಿದರು. ವಿದ್ವಾನ್ ಪಿ. ಎಸ್. ಶೇಷಗಿರಿರಾಯರು ಉಪನಿಷತ್‌ಗಳ ಬಗ್ಗೆ ಮಾತನಾಡಿದರು.

4-2-96 ರಲ್ಲಿ ದಾಸಸಾಹಿತ್ಯ ಪ್ರಾಜೆಕ್ಟ್ ವಿಶೇಷಾಧಿಕಾರಿ ಶ್ರೀ ಕೆ. ಅಪ್ಪಣ್ಣಾಚಾರ್ಯರ ನೇತೃತ್ವದಲ್ಲಿ ವಿಚಾರಗೋಷ್ಠಿ ನಡೆಯಿತು. ನಂತರ ಮಧ್ವಾಚಾರ್ಯರ ಉತ್ಸವ ಮೂರ್ತಿಯ ಮೆರವಣಿಗೆ ನಡೆಯಿತು. ಬೆಂಗಳೂರು, ಮಂಡ್ಯ, ಮೈಸೂರು ನಗರಗಳ ಎಂಟು ಭಜನಾಮಂಡಳಿಗಳು ಉತ್ಸವದಲ್ಲಿ ಭಾಗವಹಿಸಿದ್ದವು.

## ಅದ್ಭುತ ಶಾಂತಿ ಯಜ್ಞ

ತಿ.ತಿ.ದೇ. ಧರ್ಮಪ್ರಚಾರ ಪರಿಷತ್ತಿನ ರಜತೋತ್ಸವ ಸಂದರ್ಭಗಳಲ್ಲಿ ನಡೆದ ಸಾಧುಸಂತ ಸಮ್ಮೇಳನದಲ್ಲಿ ನಿರ್ಣಯಿಸಿದಂತೆ, ಶ್ರೀ ಮಹಾವಿಷ್ಣು ಸುದರ್ಶನ ಅದ್ಭುತ ಶಾಂತಿ ಯಜ್ಞವನ್ನು ವಿಶಾಖಪಟ್ಟಣದ ಮುವ್ವಲ ಪಾಲೆಂನ ತಿ.ತಿ.ದೇ. ಕಲ್ಯಾಣ ಮಂಟಪದಲ್ಲಿ ಫೆಬ್ರವರಿ 25 ರಿಂದ ಮೂರು ದಿನಗಳ ಕಾಲ ಯಶಸ್ವಿಯಾಗಿ ನಡೆಸಲಾಯಿತು.

ಈ ಯಜ್ಞದ ಏರ್ಪಾಡುಗಳನ್ನು ಕುಟ್ರಾಲಂ ಪೀಠಾಧಿಪತಿ ಶ್ರೀ ಶ್ರೀ ಶಿವಚಿದಾನಂದ ಭಾರತೀ ಸ್ವಾಮಿಗಳು ಹಾಗೂ ಪುಷ್ಪಗಿರಿ ಪೀಠಾಧಿಪತಿ ಶ್ರೀ ಶ್ರೀ ವಿದ್ಯಾನೃಸಿಂಹಭಾರತೀ ಸ್ವಾಮಿಗಳೂ ಪರ್ಯವೇಕ್ಷಿಸಿದರು ಶ್ರೀಭಾಷ್ಯಂ ಅಪ್ಪಲಾಚಾರ್ಯುಲು, ಶ್ರೀ ಸಮುದ್ರಾಲ ಲಕ್ಷ್ಮಣಯ್ಯ ಮೊದಲಾದವರ ಧಾರ್ಮಿಕ ಪ್ರಸಂಗಗಳೊಂದಿಗೆ, ಸಂಗೀತ, ಸಾಂಸ್ಕೃತಿಕ ಕಾರ್ಯಕ್ರಮಗಳೂ ಏರ್ಪಾಡಾಗಿದ್ದವು. ಗೃಹ



















ಸ್ಥರು ರೂ. 250/- ಶುಲ್ಕ ಸಲ್ಲಿಸಿ ಯಜ್ಞದಲ್ಲಿ ಭಾಗವಹಿಸಿದ್ದರು. ಎರಡು ಮೂರನೆಯದಿನಗಳಲ್ಲಿ ಅರ್ಚನೆ, ತೋಮಾಲೆ ಸೇವೆಗಳಲ್ಲಿ ದಿನಕ್ಕೆ ರೂ. 100/- ರಂತೆ ಶುಲ್ಕ ಸಲ್ಲಿಸಿ ಭಾಗವಹಿಸಿದ್ದರು.

ಕಾರ್ಯಕ್ರಮದ ಭಾಗವಾಗಿ ಧರ್ಮ ಪ್ರಚಾರ ಪರಿಷತ್ ವತಿಯಿಂದ ಉಚಿತ ಸ್ತೋತ್ರ ಪಾಠ ವಿತರಣೆ, ಪ್ರಸಾದ ವಿತರಣೆಗಳು ನಡೆದವು. ತಿ.ತಿ.ದೇ. ಧಾರ್ಮಿಕ ಪುಸ್ತಕಗಳ, ಕ್ಯಾಸೆಟ್‌ಗಳ ಪ್ರದರ್ಶನ ಮಾರಾಟಗಳೂ ಏರ್ಪಾಡಾಗಿದ್ದವು.

## ನೆಲ್ಲೂರಿನಲ್ಲಿ ಪುರಂದರ ಆರಾಧನೆ

ನೆಲ್ಲೂರಿನ ಪುರಸಭಾ ಭವನದಲ್ಲಿ 13-2-96 ರಿಂದ 19-2-96 ರ ವರೆಗೆ ಪುರಂದರದಾಸರ ಆರಾಧನಾ ಉತ್ಸವವು ನೆಲ್ಲೂರಿನ ಪುರಂದರದಾಸ ಗಾನ ಸಭೆ ಹಾಗೂ ತಿ.ತಿ.ದೇ. ದಾಸಸಾಹಿತ್ಯ ಪ್ರಾಜೆಕ್ಟ್‌ನವರ ಸಂಯುಕ್ತ ಆಶ್ರಯದಲ್ಲಿ ನಡೆದು ಯಶಸ್ವಿಯಾಯಿತು.

ಆದೋನಿಯ ಶ್ರೀ ನಾಗರಾಜು ಅವರಿಂದ ಉಪನ್ಯಾಸ, ಶ್ರೀಮತಿ ಎಂ. ಸುಶೀಲ ಅವರಿಂದ ಗಾತ್ರಕಚೇರಿಗಳೂ, ಶ್ರೀ ಕೆ. ಅಪ್ಪಣ್ಣಾಚಾರ್ಯರ ದಾಸಸಾಹಿತ್ಯದ ಬಗೆಗಿನ ಉಪನ್ಯಾಸ, ಅವಧಾನಿ ಶ್ರೀ ಸದಾನಂದ ಶಾಸ್ತ್ರಿ ಅವರಿಂದ ಉಪನ್ಯಾಸಗಳು ನಡೆದವು. ನೆಲ್ಲೂರು ಮಹಿಳಾ ಮಂಡಳಿಯವರ ಸೌಂದರ್ಯಲಹರಿ ರೂಪಕವೂ, ಮಹತಿ ನಾಟ್ಯ ಮಂಡಳಿ ಅವರ "ಭಕ್ತ ಪುರಂದರ ದಾಸ" ನಾಟಕವೂ ರಂಜನೀಯವಾಗಿದ್ದವು. ತಿರುಪತಿಯ ಶ್ರೀ ಬಾಲಕೃಷ್ಣ ಪ್ರಸಾದರ ಗಾತ್ರಕಚೇರಿ ಸೊಗಸುಗಟ್ಟಿತು.



Published on behalf of T. T. Devasthanams by N. S. Ramamurthy, M.A., Editor and
Printed at T.T.D. Press by P. Mohan Rao, Manager, T.T.D. Press, Tirupati - 517 507

